ಶ್ರೀ



# ಸಾಧು ಸದಾಶಿವಲೀಲೆ



ಕಾಶಕ —

ರಾಮಚಂದ್ರ ತ್ರ್ಯಂಬಕ ಕರ್ಪೂರ,

ಮ್ಯಾನೇಜರ, ಸ. ಚ , ಆನಂದವನ.



೩ನೆಯ ಆವೃತ್ತಿ

— (೦). —

೧೯೩೭.

ಬೆಲೆ ೪ ಆಣೆ.

# ಶ್ರೀಸಾಧುಸದಾಶಿವಲೀಲೆ.

## ೧ನೆಯ ಪ್ರಕರಣ - ಮೂದಾಪುರದ ಚರಂತಪ್ಪನು.



ಕರ್ನಾಟಕದೊಂದು ಭಾಗವಾದ ಧಾರವಾಡಜಿಲ್ಲೆಯ ದಕ್ಷಿಣ ದಿಕ್ಕಿನಲ್ಲಿ ಐತಿಹಾಸಿಕ ಪ್ರಸಿದ್ಧವಾದ ಸವಣೂರೆಂಬ ದೊಡ್ಡ ಊರ ವಾಯುವ್ಯದಿಕ್ಕಿನಲ್ಲಿ ಮೂದಾಪುರವೆಂಬ ಗ್ರಾಮವಿರುವದು. ಅಲ್ಲಿ ಶಿವಭಕ್ತರಾದ ಲಿಂಗಾಯತರ ವಸ್ತಿಯು ಬಹಳ. ಆ ಊರ ಹಿರಿಯಮಠದ ಶಿವಯ್ಯನೆಂಬ ಧರ್ಮಗುರುವರನ ಹೊಟ್ಟೆಯಲ್ಲಿ ಪಾರ್ವತೆಮ್ಮನ ಪುಣ್ಯೋದರದಿಂದ ಶಕೆ ೧೭೬೪ರ ಸುಮಾರಿನಲ್ಲಿ ಒಬ್ಬ ಮಗನು ಹುಟ್ಟಿದನು. ಆತನ ಹೆಸರು ಶಂಭುಲಿಂಗಯ್ಯ. ಶಂಭುಲಿಂಗಯ್ಯನು ಚಿಕ್ಕಂದಿನಲ್ಲಿ ವಿದ್ಯಾಭ್ಯಾಸವನ್ನು ಮಾಡಿ ತಾಯಿ-ತಂದೆಗಳ ಪ್ರೀತಿಗೆ ಪಾತ್ರನಾಗಿ ಕಾಲವನ್ನು ಕಳೆಯುತ್ತಿದ್ದನು. ಈತನ ಸದಾಚರಣೆಯೂ, ಸುಶೀಲತ್ವವೂ, ಶಾಂತಸ್ವಭಾವವೂ, ಸರಳತನವೂ ಜನರ ಚಿತ್ತವನ್ನು ಆಕರ್ಷಿಸುತ್ತಿದ್ದವು. ಹೀಗಿರುವಾಗ ಕೆಲಕಾಲದ ಮೇಲೆ ಶಂಭುಲಿಂಗಾರ್ಯನಿಗೆ ಸಂಸ್ಕೃತವು ಸುಲಭವಾಗಿ ಬರಹತ್ತಿತು, ಅದರಿಂದ ಆತನು ಸ್ವಲ್ಪ ದಿವಸಗಳಲ್ಲಿ ಸಂಸ್ಕೃತವನ್ನು ಚನ್ನಾಗಿ ಕಲಿತು, ಧರ್ಮಾಭಿಮಾನಕ್ಕೆ ಒಳಗಾಗದೆ, ಅದ್ವೈತಗ್ರಂಥಗಳನ್ನು ಅವಲೋಕಿಸಬೇಕೆಂದು ಆತುರಪಡಹತ್ತಿದನು, ಆದರ ಗ್ರಂಥಗಳ ಅನುಕೂಲತೆಯು ದ್ದಿಲ್ಲ. ತನಗೆ ಗ್ರಂಥಗಳು ಹ್ಯಾಗೆ ದೊರೆಯಬಹುದೆಂದು ಶಂಭುಲಿಂಗಾರ್ಯನು ಯೋಚಿಸುತ್ತಿರಲು, ಆತನ ತಂದೆಯಾದ ಶಿವಯ್ಯನವರು ಮಗನ ಲಗ್ನಮಾಡಬೇಕೆಂದು ಯತ್ನಿಸಹತ್ತಿದರು. ಆದರೆ ಶಂಭುಲಿಂಗಾರ್ಯನು ಅದಕ್ಕೆ ಒಪ್ಪಲಿಲ್ಲ. ಆಗ ಕೆಲವು ಭಕ್ತರು ಕೂಡಿ ಈತನಿಗೆ [illegible] ಚರಮೂರ್ತಿ ಪಟ್ಟವನ್ನಾದರೂ ಕಟ್ಟಬೇಕೆಂದು ಯೋಚಿಸಿ, ಅದಕ್ಕೆ ಶಂಭುಲಿಂಗಾರ್ಯನ ಒಪ್ಪಿಗೆಯನ್ನು ಕೇಳಿದರು. ಜನ್ಮತಃ ವಿರಕ್ತನಾಗಿದ್ದ ಶಂಭುಲಿಂಗಾರ್ಯನು ಈ ಚರಂತಿಪಟ್ಟದಿಂದ ಗ್ರಂಥಸಂಗ್ರಹಕ್ಕೂ ಗ್ರಂಥಾವಲೋಕನಕ್ಕೂ ತನಗೆ ಅನುಕೂಲವಾಗಬಹುದೆಂದು ತಿಳಿದು, ಭಕ್ತರ ಮಾತಿಗೆ ಒಪ್ಪಿಕೊಂಡನು. ಆಗ ಎಲ್ಲ ಭಕ್ತರು ಸಂತೋಷಪಟ್ಟು ಶಂಭುಲಿಂಗಾರ್ಯನಿಗೆ ಚರಮೂರ್ತಿಪಟ್ಟವನ್ನು ಕಟ್ಟಿದರು.

ಹ್ಯಾಗಿದ್ದರೂ ಶಂಭುಲಿಂಗಾರ್ಯನು ಚರಮೂರ್ತಿಯ ಪಟ್ಟವನ್ನು ಮನ ಮುಟ್ಟಿ ಯಸಿದವನಲ್ಲ ಧರ್ಮಗುರುತ್ವವು ಕೇವಲ ಅಹಂಭಾವಯುಕ್ತ ವಾದದ್ದೆಂತಲೂ, ಇದರಿಂದ ವಿಷಯವಾಸನೆಯು ಪೂರ್ಣವಾಗಿ ಅಳಿದು ಮನಶ್ಶುದ್ಧಿಯಾಗುವದಿಲ್ಲೆಂತಲೂ ಅವನು ಮೊದಲೇ ತಿಳಿದಿದ್ದನು ಅನುಭವದಿಂದ ಆ ಮಾತು ಸತ್ಯವಾಗಿ ತೋರಿ, ಚರಮೂರ್ತಿಪಟ್ಟವು ಆತನ ಬೇಸರಕ್ಕೆ ಕಾರಣವಾಯಿತು. ಸುಖೋಪಭೋಗದ ಗಾಳಿಗೆ ಕೂಡಸಿಲ್ಲದ ಆ ಸಜ್ಜನನಿಗೆ ಯಥಾರ್ಥಜ್ಞಾನದ ವಿಚಾರವು ಉತ್ಪನ್ನವಾಯಿತು ಗುರುವಿನ ಗುಲಾಮನಾಗುವ ತನಕ ಸತ್ಯಜ್ಞಾನವು ಹೃದಯದಲ್ಲಿ ಹೊಳೆದೋರದೆಂದು ತಿಳಿದು, ಆತನು ತನ್ನ ಚರಮೂರ್ತಿಯ ಪಟ್ಟವನ್ನು ಧಿಕ್ಕರಿಸಿ, ಸದ್ಗುರುವನ್ನು ಹುಡುಕುವದಕ್ಕಾಗಿ ಮಠದಿಂದ ಹೊರಟನು ನಿಜವಾದ ಮುಮುಕ್ಷುಪದವಿಯನ್ನು ಹೊಂದಿದ ಶಂಭುಲಿಂಗಾರ್ಯನು, ಹಸಿವೆ ನೀರಡಿಕೆಗಳ ಪರಿವೆಯಿಲ್ಲದೆ ಸದ್ಗುರುವನ್ನು ಹುಡುಕುತ್ತ ತಿರುಗಹತ್ತಿದನು ಆಗ ಮೈಸೂರ ಸೀಮೆಯಲ್ಲಿರುವ ಉರ್ವಕೊಂಡಿಯೆಂಬಲ್ಲಿ ಒಬ್ಬ ಪರಮಹಂಸ ಶಿವಯೋಗಿಯು ವಾಸಿಸುತ್ತಿದ್ದನು. ಶಂಭುಲಿಂಗಾರ್ಯನ ಪ್ರಾಚೀನಪುಣ್ಯದಿಂದ ಅವನಿಗೆ ಆ ಯೋಗಿಯ ಗೊತ್ತು ಹತ್ತಿತು. ಹಸಿದವನಿಗೆ ಮಿಷ್ಟಾನ್ನಭೋಜನವು ದೊರೆತಂತಾಗಿ, ಶಂಭುಲಿಂಗಾರ್ಯನು ಗುರುಸೇವೆಯ ಆನಂದದಲ್ಲಿ ಮಗ್ನನಾದನು. ಆತನಿಗೆ ಗುರುಸೇವೆಯ ಹೊರತು ಬೇರೊಂದರ ಅರಿವು ಉಳಿಯಲಿಲ್ಲ ಆ ಪುಣ್ಯವಂತನು ಚಿಕ್ಕಂದಿನಿಂದಲೇ ಯಾವ ಬಂಧನಕ್ಕೂ ಒಳಗಾಗದಂತೆ ಜಾಗರೂಕನಾಗಿದ್ದನು. ಅದರಲ್ಲಿ ಸದ್ಗುರುವಿನ ಸಮಾಗಮಸುಖವು ಪ್ರಾಪ್ತವಾದ ಬಳಿಕ ಬೇರೆ ವಾಸನೆಗಳ ಬಾಧೆಯು ಆತನಿಗೆ ಹ್ಯಾಗೆ ತಟ್ಟಬೇಕು? ಶಂಭುಲಿಂಗಾರ್ಯನು ಗುರುಸೇವಾರೂಪವಾದ ತಪಶ್ಚರ್ಯದಿಂದ ಗುರುವಿನ ಮನಸ್ಸನ್ನು ಪ್ರಸನ್ನೀಕರಿಸಿಕೊಂಡು ಸದ್ಬೋಧವನ್ನು ಪಡೆದು ಕೃತಾರ್ಥನಾದನು ಆಗ ಆತನ ಧರ್ಮಾಭಿಮಾನವು ಸಂಪೂರ್ಣವಾಗಿ ಅಳಿದುಹೋಯಿತು ಲೌಕಿಕವ್ಯವಹಾರವು ತುಚ್ಛವಾಗಿ ತೋರಿದ್ದರಿಂದ, ಆತನು ವ್ಯವಹಾರದಲ್ಲಿ ಕೇವಲ ಹುಚ್ಚನಂತೆ ವ್ಯವಹರಿಸಹತ್ತಿದನು. ಈ ಸ್ಥಿತಿಯಲ್ಲಿ ಆತನು ಕೆಲವು ದಿನಗಳಮೇಲೆ ತನ್ನ ಗ್ರಾಮದ ನೆರೆಯಲ್ಲಿರುವ ಗಂಜೀಗಟ್ಟಿ ಎಂಬ ಊರಿಗೆ ಬಂದನು ಆತನ ಸ್ಥಿತಿಯನ್ನು ನೋಡಿ ಜನರು ಆತನನ್ನು ಹುಚ್ಚನೆಂದು ಕರೆಯಹತ್ತಿದರು.

ಮಹಾಜ್ಞಾನಿಯಾದ ಶಂಭುಲಿಂಗಾರ್ಯನ ನಡತೆಯನ್ನು ನೋಡಿದರೆ, ಈತನು ಹುಚ್ಚನೆಂದು ಅಜ್ಞಾನಿಗಳು ಸಹಜವಾಗಿ ತಿಳಿಯಬಹುದಾಗಿತ್ತು. ಅಂತೇ ಆ ಮಹಿಮನಿಗೆ ಹುಚ್ಚನೆಂಬ ಪದವಿಯು ಅಜ್ಞಾನಿಗಳಿಂದ ದೊರೆಯಿತು ಹುಚ್ಚನು ಹರಕು ಅರಿವೆಯ ಕೈಸವನ್ನು ಹಾಕಿಕೊಂಡು, ತಲೆಗೆ ಕೆಂಪುವಸ್ತ್ರದ ಚಿಂದಿಯನ್ನು ಸುತ್ತಿಕೊಳ್ಳುತ್ತಿದ್ದನು ಆತನ ಹೆಗಲಮೇಲೆ ಒಂದು ಹರಕಗೊಂಗಡಿಯ ತುಣುಕು ಇರುತ್ತಿತ್ತು ಆತನು ಒಂದಾನೊಂದು ಮನೆಯ ಮುಂದೆ ನಿಂತುಕೊಂಡು "ರೊಟ್ಟೀಕೊಡು" ಎಂದು ಒದರುತ್ತಿದ್ದನು. ಯಾರಾದರೂ ರೊಟ್ಟಿಯನ್ನು ಕೊಟ್ಟರೆ, ಕೂಡಲೆ ಅದನ್ನು ಮುದ್ದೆ ಮಾಡಿ ಬಾಯಲ್ಲಿ ಹಾಕಿಕೊಂಡು ಅಗಿದು ತಿಂದು, ಲಿಂಗಾಯತರು ಕಾಲತೊಳಕೊಳ್ಳುವದಕ್ಕಾಗಿ ಮನೆಯಬಾಗಿಲ ಮುಂದೆ ನಟ್ಟಿರುವ ಕಲ್ಲುದೋಣಿಯೊಳಗಿನ ನೀರನ್ನು ಅಂಜೇಗಾಲು ಹಚ್ಚಿ ಕುಳಿತು ಕುಡಿಯುತ್ತಿದ್ದನು. ರೊಟ್ಟಿಯು ಕೊಡದಿದ್ದರೆ ಹಾಗೇ ಹೊರಟು ಹೋಗುತ್ತಿದ್ದನು ಆತನು ಬಹಳ ಮಾತಾಡುತ್ತಿದ್ದಿಲ್ಲ ಜನರು ಯಾವ ದರೂ ಏನೊಂದು ಉದ್ಯೋಗವನ್ನು ಮಾಡುತ್ತಿದ್ದರೆ, ತಾನು ಅವರೊಡನೆ ಆ ಉದ್ಯೋಗ ಮಾಡುವವನಂತೆ ತೋರಿಸಿ, ಕಡೆಗೆ ಕೆಲಸವನ್ನು ಕಡಿಸತೊಡಗುತ್ತಿದ್ದನು ಈ ಕಿಡಿಗೇಡಿತನಕ್ಕಾಗಿ ಜನರು ಸಿಟ್ಟಿಗೆದ್ದರೆ ತಾನೂ ಸಿಟ್ಟಿಗೆದ್ದವನಂತೆ ನಟಿಸಿ ಜಗಳಕ್ಕೆ ಅಣಿಯಾಗುತ್ತಿದ್ದನು. ಜನರಿಂದ ದಬ್ಬಿಸಿಕೊಳ್ಳುವದು, ಪೆಟ್ಟು ತಿನ್ನುವದು, ಅವರೊಡನೆ ಕುಸ್ತಿಯಾಡುವದು ನಮ್ಮ ಹುಚ್ಚನ ಪ್ರೇಮದ ವಿನೋದಗಳಾಗಿದ್ದವು ಇದಲ್ಲದೆ ಈತನು ಜನರು ಆಡುವ ಇಸ್ಪೇಟು-ಚದುರಂಗ-ಗಂಜೀಫು ಮೊದಲಾದ ಆಟಗಳಲ್ಲಿ ಸೇರಿ, ಕೆಲಹೊತ್ತು ಆಡಿ ಕಡೆಗೆ ಮೇಲೆ ಹೇಳಿದಂತೆ ರಂಟಿತೆಗೆದು ಜನರೊಡನೆ ಗುದಮುರಿಗೆ ಹಾಕುತ್ತಿದ್ದನು. ಆತನು ವರ್ಣಾಶ್ರಮಗಳನ್ನೂ ಕುಲಾಭಿಮಾನವನ್ನೂ ವಿಷಯವಾಸನೆಯಲ್ಲಿ ಹೋಮಿಸಿ, ಅವುಗಳನ್ನು ಬಿಟ್ಟುಕೊಟ್ಟು, ಬೇಕಾದ ಜಾತಿಯವರಲ್ಲಿ ಊಟ ಮಾಡುತ್ತಿದ್ದನು. ಯಾವಾಗಲೂ ಶಿವೋಪಾಸನೆಯಲ್ಲಿಯೇ ಮನಸ್ಸನ್ನಿರಿಸಿದ್ದರಿಂದ ದೇಹದ ಅಭಿಮಾನಕ್ಕೋಸ್ಕರವಾಗಿಯೂ, ಸುಖಕ್ಕೋಸ್ಕರವಾಗಿಯೂ ಆತನು ಅಷ್ಟೊಂದು ಲಕ್ಷ್ಯಗೊಡುತ್ತಿದ್ದಿಲ್ಲ ಅಂಥ ಉಪಾಸ್ಯೋಪಾಸಕೈಕ್ಯಭಾವವು ಅಳವಟ್ಟದ್ದರಿಂದ ಲೌಕಿಕರಿಗೆ ಆತನು ಹುಚ್ಚನಂತೆ ಕಾಣಹತ್ತಿದ್ದು ಆಶ್ಚರ್ಯವಲ್ಲ

ಹೀಗೆ ಶಂಭುಲಿಂಗಾರ್ಯನು ಹುಚ್ಚರಂತೆ ಇರುತ್ತಿರಲು, ಆ ಊರಲ್ಲಿದ್ದ ಕಲ್ಲಮ್ಮನೆಂಬ ಒಬ್ಬ ಸೂಳಿಯು ಆತನ ಮಹತ್ವವನ್ನು ಅರಿಯುವ ಪ್ರಸಂಗವು

ಬಂದಿತು. ಆತನು ಒಂದು ದಿನ ಸ್ವಾಭಾವಿಕವಾಗಿ ಆ ಸೂಳೆಯ ಮನೆಯ ಸಮೀಪದಲ್ಲಿ ಹಾದು ಹೋಗುತ್ತಿರಲು, ಆಕೆಯು "ಏ ಹುಚ್ಚಾ, ರೊಟ್ಟೀಹಿಡಿ-ರೊಟ್ಟೀಹಿಡಿ" ಎಂದು ಒದರಹತ್ತಿದಳು. ಅದನ್ನು ಕೇಳಿ ಹುಚ್ಚನು ಆಕೆಯ ಮನೆಗೆ ಹೋದನು ಕಲ್ಲವ್ವನು ರೊಟ್ಟಿಯನ್ನು ಕೊಡದೆ ಹುಚ್ಚನನ್ನು ಮನೆಯೊಳಗೆ ಕರಕೊಂಡು ಹೋದಳು. ಅದನ್ನು ನೋಡಿ ಕಂಡವರು ಕಂಡಂತೆ ಕಲ್ಪಿಸಹತ್ತಿದರು. ಮನೆಯಲ್ಲಿ ಹೋದಬಳಿಕ "ಯಾಕೆ, ಯಾಕ," ಎಂದು ಕೇಳಿದ ಮೇಲೆ ಸ್ವಲ್ಪ ಹೊತ್ತಿನಲ್ಲಿ ಕಲ್ಲವ್ವನು ಹುಚ್ಚನನ್ನು ಹೊರಗೆ ಎಳತಂದು, ಗ್ರಾಮ್ಯಭಾಷೆಯಿಂದ—"ದುಡಿಯಲಾರದ ಜೋಗಿಗಳಿರಾ, ಹೀಗೆ ಕೂರಿಬಕ್ಕರಾಗಿ ಬಿಕ್ಕೆಬೇಡಿಕೋತ ಯಾಕೆ ತಿರಗತೀರಿ? ಕೋಣನಾಗೀ, ಹೋಗೋ ಮೂಳಾ ಹೋಗು' ಎನ್ನುತ್ತ ಹೊರಗೆ ದೂಡಿ ಬಿಟ್ಟಳು. ಆಗ ಹುಚ್ಚನು ತನ್ನ ಸರಕು ಚಿಂದಿಗಳನ್ನು ಸಾವರಿಸಿಕೊಳ್ಳುತ್ತಾ ಹೊರಟುಹೋದನು. ಮುಂದೆ ಆರುತಾಸು ರಾತ್ರಿಯ ಸುಮಾರಕ್ಕೆ ಆಕೆಯು ಹೊರಗೆ ಬಂದಿರಲು, ಯಾರೋ ಗುಣುಗುಟ್ಟುತ್ತಿರುವಂತೆ ಕೇಳಿಸಿತು. ಕಳ್ಳರ ಭಯದಿಂದ ಆಕೆಯು ಮನೆಯೊಳಗೆ ಹೋಗುತ್ತಿರಲು ಗುಣುಗುಟ್ಟುವ ಶಬ್ದವು ಕಳ್ಳರ ಶಬ್ದದಂತೆ ಕಾಣದ್ದರಿಂದ, ಆಕೆಯು ಧೈರ್ಯಮಾಡಿ, ಸಪ್ಪಳದ ಸುಳುವು ಹಿಡಿದು, ಮುಂದಕ್ಕೆ ಹೋದಳು. ಒಬ್ಬನು ತನ್ನಷ್ಟಕ್ಕೆ ತಾನೇ ಮಾತಾಡಿಕೊಳ್ಳುತ್ತಿದ್ದನು ಇವನು ಯಾರಿರಬಹುದೆಂದು ಕಲ್ಲವ್ವನು ಮಾತುಕೇಳುತ್ತಿರಲು, ಅವನು—ಹೇ ಪರಬ್ರಹ್ಮಾ, ದೃಶ್ಯಾದೃಶ್ಯ ಪದಾರ್ಥಗಳೆಲ್ಲ ನೀನೇ ಆಗಿರುವದರಿಂದ ನೀನೇ ನಾನಾಗಿರಲು, "ತತ್ವಮಸಿ"ಯೆಂಬ ಮಹಾವಾಕ್ಯದ ಅನುಭವವು ನಿನ್ನ ಕೃಪೆಯಿಂದ ನನಗೆ ಪೂರ್ಣವಾಗಿ ಆಯಿತು ಈ ಮಹಾವಾಕ್ಯದ ಶ್ರವಣ-ಮನನ-ನಿಧಿಧ್ಯಾಸಗಳ ಬಲದಿಂದ ನಿಶ್ಚಯಜ್ಞಾನ ಮಾಡಿಕೊಟ್ಟು ಚಿದಾನಂದೈಕ ಸುಖವನ್ನು ಒದಗಿಸಿಕೊಟ್ಟ ಉರ್ವಕೊಂಡಿಯ ಗುರುವರಾ, ನಿನಗೆ ನಾನು ವಂದಿಸುತ್ತೇನೆ. ನಿನ್ನನ್ನು ತ್ರಿಕಾಲದಲ್ಲಿ ಎಷ್ಟು ವಂದಿಸಿ ಸ್ತುತಿಸಿದರೂ ಸ್ವಲ್ಪವೇ ಇರುವದು. ಹೇ ದಯಾನಿಧೇ ಇದೆಲ್ಲ ನಿನ್ನ ಕೃಪೆಯ ಫಲವು. ಈ ಘಟದ ಸಂಚಿತದಿಂದ, ಹಡೆದ ತಾಯಿತಂದೆಗಳಾದ ಮಾಸಾಪುರದ ಹಿರಿಯಮಠದ ಶಿವಯ್ಯ-ಪಾರ್ವತವ್ವನವರ ಪ್ರೀತಿಗೆ ಆಸ್ಪದವಾಗಬೇಕಾಯಿತು, ಮತ್ತು ಧರ್ಮಗುರುವೆನಿಸುವ ಚರಮೂರ್ತಿಯ ಪಟ್ಟಕ್ಕೆ ಲೌಕಿಕ ಸನ್ಯಾಸಿಯಾಗಿ ಭಕ್ತರಿಂದ ನೇಮಿಸಲ್ಪಡಬೇಕಾಯಿತು. ಹೀಗಿರಲು, ಅಸ್ಥಿರವಾದ ಕಿಂಚಿತ್ಸುಖದ ಆಶೆಯನ್ನು ಬೋಧಮಾತ್ರದಿಂದ ಬಿಡಿಸಿ

ಬ್ರಹ್ಮಾನಂದದಲ್ಲಿ ಪೂರ್ಣವಾಗಿ ಮುಣುಗಿಸಿ ಕೈವಲ್ಯಸುಖವನ್ನು ನೀನು ಉಂಟು ಮಾಡಿದೆ. ಆ ಬ್ರಹ್ಮಪರಾಯಣತೆಯು ಸ್ಥಿರತ್ವಕ್ಕೋಸ್ಕರ ಪ್ರಾರಬ್ಧ ಸಂಸ್ಕಾರ ವಶದಿಂದ ಪುನಃ ಕರತಲಭಿಕ್ಷಾ-ತರುತಲ ವಾಸರೂಪವಾದ ಕರ್ಪರವನ್ನು ಹಿಡಿಯ ಬೇಕಾಯಿತು ಆನಂದದ ಸ್ಥಿರತ್ವಕ್ಕಾಗಿಯೂ, ಮನಶ್ಶುದ್ಧಿಗಾಗಿಯೂ ನಟನ ಮಾತ್ರದಿಂದ ಜನರಿಗೆ ಉಪದ್ರವ ಕೊಡಲು, ಅವರಿಂದ ತಿನ್ನುವ ಪೆಟ್ಟುಗಳೇ ನನ್ನ ಬ್ರಹ್ಮಸ್ಥಿರತ್ವಕ್ಕೆ ಗುರುವಚನಗಳಾದವು. ಇತರರು ನನಗೆ ಮಾಡುವ ವಂದ ನಾದಿ ಉಪಚಾರಗಳು ನನ್ನ ಧ್ಯಾನಕ್ಕೆ ಕಂಟಕಗಳಾಗಿರುವದರಿಂದ, ಅವುಗಳನ್ನು ಬಿಟ್ಟು, ದುಃಖಾಸ್ಪದವಾದ ನನ್ನ ಸ್ಥಳವೇ ಮೋಕ್ಷಾಲಯವೆಂದೆಣಿಸಿ ದುಃಖಕೊಡು ವವರನ್ನೇ ಆಶ್ರಯಿಸಿದ್ದೆನು. ಅಷ್ಟರಲ್ಲಿ ಈಪೊತ್ತಿನ ದಿವಸ ಕಲ್ಲಮ್ಮನು ಮಾಡಿದ ಅಪಮಾನವು ನನ್ನ ಬ್ರಹ್ಮಭಾವನೆಯು ಸ್ಥಿರತ್ವಕ್ಕೆ ಅನುಕೂಲವಾದದ್ದರಿಂದ, ಆ ಮಹಾತಾಯಿಗೆ ವಂದಿಸಿ, ಧನ್ಯನಾಗುತ್ತೇನೆ" ಎಂದು ನುಡಿಯುತ್ತಿದ್ದನು.

ಈ ಮಾತುಗಳನ್ನು ಕೇಳಿ ಕಲ್ಲಮ್ಮನು ಭಯದಿಂದ ನಡುಗಹತ್ತಿದಳು. ಈತನು ಮಾದಾಪುರದ ಚರಂತಪ್ಪನೆಂತಲೂ ಪಾರ್ವತವ್ವ-ಶಿವಲಿಂಗನವರು ಈತನ ತಾಯಿ ತಂದೆಗಳೆಂತಲೂ, ಈತನು ಹಿಂದೆ ಮನೆಬಿಟ್ಟು ಗುಡ್ಡಗಳಿಗೆ ಹೋಗಿ, ತಿರುಗಾಡಿ ಬಂದು ಹೀಗೆ ಆಗಿರುವನಂತಲೂ, ಇವನು ಸಾಮಾನ್ಯನಲ್ಲೆಂತಲೂ ತರ್ಕಿಸಿ, ಅಂಜುತ್ತ ಆತನ ಬಳಿಗೆ ಹೋಗಿ, ಸಾಷ್ಟಾಂಗನಮಸ್ಕಾರ ಮಾಡಿದಳು. ಆಕೆಯು ಕೈಜೋಡಿಸಿ ನಿಂತುಕೊಂಡು ಚರಂತಪ್ಪನಿಗೆ—ಸ್ವಾಮಿಾ, ನನ್ನ ಅಪ ರಾಧಗಳನ್ನು ಕ್ಷಮಿಸಬೇಕು ನನ್ನಂಥ ಘೋರಪಾತಕಿಯು ಲೋಕದಲ್ಲಿ ಮತ್ತೊಬ್ಬಳಿಲ್ಲ ನಾನು ಅಧಮಾಧಮಳು. ಪಾಪಿಯ ಸಹಸ್ರಾಪರಾಧಗಳನ್ನು ಕ್ಷಮಿಸಿ ಉದ್ಧರಿಸಬೇಕು, ಎಂದು ಬೇಡಿಕೊಂಡಳು, ಆದರೆ ಹುಚ್ಚನು ಸುಮ್ಮನೆ ಕುಳಿತುಕೊಂಡಿದ್ದನು ಕಲ್ಲಮ್ಮನು ಎಷ್ಟು ಹೇಳಿಕೊಂಡರೂ ಆತನು ಒಂದು ತುಟಿ ಎರಡುಮಾಡಲಲ್ಲ. ಕಲ್ಲಮ್ಮನು ಬಹಳಹೊತ್ತು ನಿಂತುಕೊಂಡು, ಹುಚ್ಚನು ಮಾತಾಡದಿರಲು, ತನ್ನನ್ನು ತಾನೇ ಹಳಿದುಕೊಳ್ಳುತ್ತ ಮನೆಗೆ ಹೋದಳು. ಮರುದಿನ ಬೆಳಗಾಗ ಮೇಲೆ ಆಕೆಯು ಹುಚ್ಚನ ವೃತ್ತಾಂತವನ್ನು ಊರೊಳಗಿನವ ನೊಬ್ಬನ ಮುಂದೆ ಹೇಳಲು, ಆ ಸುದ್ದಿಯು ನಾನುಕೇಳು, ನೀನುಕೇಳು ಎಂದು ಊರಲ್ಲೆಲ್ಲ ಹಬ್ಬಿತು. ಅಂದಿನಿಂದ ಜನರು ಆ ಹುಚ್ಚನನ್ನು ಮಾದಾಪುರದ ಚರಂತಪ್ಪನೆಂದು ಕರೆಯಹತ್ತಿದರು.

---

## ೩ನೆಯ ಪ್ರಕರಣ—ಪುಟ್ಟಿಮಲ್ಲಾರ್ಯ.

ಹುಚ್ಚನೆಂಬ ಹೆಸರು ಹೋಗಿ ಚರಂತಪ್ಪನೆಂಬ ಹೆಸರುಬರಲು, ಶಂಭು ಲಿಂಗಾರ್ಯನು ಎಂದಿನಂತೆ ಬ್ರಹ್ಮಾನಂದದ ಲೀಲೆಗಳಲ್ಲಿ ಮಗ್ನನಾಗಿರುತ್ತಿದ್ದನು. ಕೆಲವು ದಿನಗಳು ಕ್ರಮಿಸುತ್ತಿರಲು, ದಕ್ಷಿಣದೇಶದಿಂದ ಒಬ್ಬಾನೊಬ್ಬ ತರುಣ ಸಂನ್ಯಾಸಿಯು ಗುರುವನ್ನು ಹುಡುಕುತ್ತ ಗಂಜೀಗಟ್ಟಿಗೆ ಬಂದನು. ತರುಣನು, ರೂಪ-ದೃಷ್ಟಿ-ವರ್ಣ-ನಿಕಟ ಇವುಗಳ ಸಂಬಂಧದಿಂದ ನಿರ್ದೋಷನಾಗಿದ್ದನಲ್ಲದೆ, ಸಾಹಸದಲ್ಲಿ ಅಪ್ರತಿಮನಾಗಿದ್ದನು. ಆತನು ಚರಂತಪ್ಪನ ದರ್ಶನ ತಕ್ಕೊಂಡನು. ಆಗ್ಗೆ ಅಂತರ್ದೃಷ್ಟಿಯಿಂದ ಚರಂತಪ್ಪನು ಸಂನ್ಯಾಸಿಯ ಎಲ್ಲ ವೃತ್ತಾಂತವನ್ನು ತಿಳಕೊಂಡವನಂತೆ ಆತನನ್ನು "ಬಾ," ಎಂದು ಕರೆದು "ಈಗ ಬಂದೆಯೇನು" ಎಂದು ಕೇಳಿದನು ಅದಕ್ಕೆ ಸಂನ್ಯಾಸಿಯು -

ಸಂನ್ಯಾಸಿ—ನಾನು ಬಂದು ೨೦ ವರ್ಷಗಳಾದವು.

ಚರಂತಪ್ಪ—ಅಲ್ಲಿಯವರೆಗೆ ಎಲ್ಲಿ ಇದ್ದೆ?

ಸಂನ್ಯಾಸಿ—ಅದು ನನಗೆ ಗೊತ್ತಿಲ್ಲ.

ಚರಂತಪ್ಪ—ಗೊತ್ತಿಲ್ಲದವನು ಬಂದೆಯಾಕೆ?

ಸಂನ್ಯಾಸಿ—ನಿನ್ನನ್ನು ಕಾಣಬೇಕಂದು.

ಚರಂತಪ್ಪ—ಕಂಡೆಯೋ?

ಸಂನ್ಯಾಸಿ—ಇನ್ನೂ ಪೂರ್ಣವಾಗಿ ಕಂಡಿಲ್ಲ

ಚರಂತಪ್ಪ—ನಿನಗೆ ಪೂರ್ಣ ಕಾಣಬೇಕಾದರೆ ನಾನು ಹ್ಯಾಗೆ ನಿಲ್ಲಲಿ?

ಸಂನ್ಯಾಸಿ—ನಿಲ್ಲುವಹಾಗೆ ನಿಲ್ಲು.

ಚರಂತಪ್ಪ—ನಿಲ್ಲುವ ಹಾಗೆ ನಿಂತರೆ ಕಾಣುವೆನೋ?

ಸಂನ್ಯಾಸಿ—ತೋರಿದರೆ ಕಂಡೀ.

ಚರಂತಪ್ಪ—ನೋಡುವವನು ಕೇಳುವನೋ?

ಸಂನ್ಯಾಸಿ—ಕೇಳಿಯೇ ನೋಡುವದು.

ಚರಂತಪ್ಪ—ಕಾಣದ್ದನ್ನು ನೋಡುವದು ಹ್ಯಾಗೆ?

ಸಂನ್ಯಾಸಿ—ತೋರುವವನ ಸಾಮರ್ಥ್ಯದಿಂದ.

ಚರಂತಪ್ಪ—ಸಾಮರ್ಥ್ಯವನ್ನು ತಿಳಿಯುವದು ಹ್ಯಾಗೆ?

ಸಂನ್ಯಾಸಿ—ನನಗೇನು ಗೊತ್ತು?

ಚರಂತಪ್ಪ—ಹಾಗಾದರೆ ಯಾರಿಗೆ ಗೊತ್ತಾಗುವದು?

ಸಂನ್ಯಾಸಿ—ಗುರುಪುತ್ರನಿಗೆ.

ಚರಂತಪ್ಪ—ನೀನು ಯಾರು?

ಸಂನ್ಯಾಸಿ—ನಾನು ನೀನೇ.

ಚರಂತಪ್ಪ—ಯಾರಿಂದ ಕಾಣಬಹುದು

ಸಂನ್ಯಾಸಿ—ಇನ್ನೂ ಯಾರಿಂದೆಂಬದರ ನಿಶ್ಚಯವಿಲ್ಲ.

ಚರಂತಪ್ಪ—ನೋಡಿ ಧನ್ಯನಾಗುವವನೊಬ್ಬನು ಬರತಕ್ಕವನಿದ್ದಾನೆ ನಿನಗೆ ಕಾಣುವಹಾಗಿಲ್ಲ. ಅವನ ಸ್ವರೂಪದ ಮೇಲಿಂದ ಇಂಥವನೇ ಎಂಬದು ಸಂಚಾರದಲ್ಲಿ ನಿನಗೆ ತಿಳಿದೀತು.

ಸಂನ್ಯಾಸಿ—ಅವನೇ ನೋಡುವವನು, ನಾನು ನೋಡುವವನಲ್ಲವೋ? ಒಳ್ಳೇದು ಅವನನ್ನು ನೋಡುವೆನು.

ಈ ಮೇರೆಗೆ ಸಂನ್ಯಾಸಿಯು ನುಡಿಯಲು, ಚರಂತಪ್ಪನು ಸುಮ್ಮನಾದನು. ಆ ಮಹಿಮನು ಏನೆಂದು ಕಲ್ಪಿಸಿಕೊಂಡನೆಂಬದು ಸಂನ್ಯಾಸಿಗೆ ಗೊತ್ತಾಗಲಿಲ್ಲ ಅಂದಿನಿಂದ ಸಂನ್ಯಾಸಿಯು ಚರಂತಪ್ಪನ ಬೆನ್ನಹತ್ತಿ ತಿರುಗಹತ್ತಿದನು. ಹೀಗೆ ಕೆಲಕಾಲ ಕ್ರಮಿಸಲು, ಒಂದುದಿನ ಆ ತರುಣ ಸಂನ್ಯಾಸಿಯು ಚರಂತಪ್ಪನನ್ನು ಕುರಿತು—ಸ್ವಾಮಿ, ನನ್ನನ್ನು ಉದ್ಧಾರ ಮಾಡಬೇಕು. ಇಲ್ಲಿಯವರೆಗೆ ನಾನು ನಿನ್ನ ಸೇವೆಯಲ್ಲಿ ತತ್ಪರನಾಗಿದ್ದರೂ ನಿನಗೆ ಅಂತಃಕರಣವು ಬರಲೊಲ್ಲದಲ್ಲ ನನಗೆ ಉಪದೇಶವನ್ನು ಕೊಡಲೇಬೇಕು. ಇಲ್ಲದಿದ್ದರೆ ನಾನೇನು ನಿನ್ನ ಪಾದಗಳನ್ನು ಬಿಟ್ಟವನಲ್ಲ, ಎಂದು ಗಟ್ಟಿಯಾಗಿ ಕುಳಿತುಕೊಂಡನು. ಆಗ ಚರಂತಪ್ಪನು—ಎಲೋ, ಉಪದೇಶಬೇಕೊ? ಉಪದೇಶವೆಂದರೆ ಏನು? ಅದು ಎಲ್ಲಿರುವದು? ಎಂದು ಕೇಳಲು, ಸಂನ್ಯಾಸಿಯು—ಆ ಉಪದೇಶವು ನಿನ್ನಲ್ಲಿಯೇ ಅದೆ, ಅದನ್ನು ಬೇಡುವದಕ್ಕಾಗಿಯೇ ನನ್ನವನೆಂದು ನಂಬಿ ನಿನ್ನ ಬಳಿಗೆ ಬಂದಿರುತ್ತೇನೆ, ಈಗ ಏನನ್ನುತ್ತಿ ಹೇಳು, ಎಂದು ಬಹಳ ಸಿಟ್ಟಿನಿಂದ ಮಾತಾಡಿದನು. ಅದಕ್ಕೆ ಚರಂತಪ್ಪನು—ಎಲೋ ನನ್ನಲ್ಲಿರುವದನ್ನು ನಿನ್ನಲ್ಲಿಟ್ಟುಕೊಂಡು ಹೋಗಲಿಕ್ಕೆ ಬಂದಿರುವೆಯಾ? ಆ ಉಪದೇಶವು "ನನ್ನದು ನಿನ್ನದು" ಎಂಬ ಅಹಂಕಾರದಿಂದ ಕೂಡಿದ್ದೂ ಅಲ್ಲ, ಹೇಳಿದರೆ ತಿಳಿಯುವದೂ ಅಲ್ಲ. "ನಾನು ನೀನೆ"ಂಬ ಅಹಂಕಾರವುಳ್ಳ ನಿನಗೆ ಅದನ್ನು ಹೇಳಲಿಕ್ಕೆ ಬರುವಹಾಗೂ ಇಲ್ಲ ನಿನಗೆ ಅದು ಬೇಕಾಗಿದ್ದರೆ ನನ್ನನ್ನು(ನಾನೆಂಬ ಅಭಿಮಾನವನ್ನು)ಕಡಿದುಬಿಡು. ಹಾಗೆ

ಮಾಡದಿದ್ದರೆ ಮಾತ್ರ ಎಂದಿಗೂ ಸಿಗದು, ಎಂದು ನುಡಿದು ಸುಮ್ಮನಾದನು.

ಉಪದೇಶದ ಹುಚ್ಚು ತಲೆಗೇರಿದ ಆ ತರುಣ ಸಂನ್ಯಾಸಿಗೆ "ನನ್ನನ್ನು ಕಡಿದರೆ" ಎಂಬ ಮಾತಿನ ಅರ್ಥವು ಅಹಂಭಾವವನ್ನು ಬಿಡಬೇಕೆಂಬುದಾಗುತ್ತದೆಂದು ತಿಳಿಯಲಿಲ್ಲ ತನ್ನ ಗುರುವನ್ನು ಕಡಿದರೆ ಉಪದೇಶವಾಗುವದೆಂದು ಆತನು ತಿಳಕೊಂಡು. ಊರೊಳಗೆ ಹೋಗಿ ಕೊಯ್ತು ತಕ್ಕೊಂಡು ಬಂದು, ರಾತ್ರಿಯು ಕಾಲದಲ್ಲಿ ಚರಂತಪ್ಪನ ಒಳಿಗೆ ಹೋಗಿ--ಇಗೋ, ನೀನು ಹೇಳಿದ ಮೇರೆಗೆ ಗುರೂಪದೇಶವನ್ನು ನಿನ್ನ ಅಪ್ಪಣೆಯ ಮೇರೆಗೆ ಸಾಧ್ಯ ಮಾಡಿಕೊಳ್ಳುತ್ತೇನೆ. ನೋಡು, ಎಂದು ಕೊಯ್ತುವನ್ನು ತೋರಿಸಿದವನೇ ಎತ್ತಿ ಚರಂತಪ್ಪನ ಕುತ್ತಿಗೆಗೆ ಹಾಕಿದನು, ಆದರೆ ಯೋಗಾಭ್ಯಾಸದ ಬಲದಿಂದಲೂ, ಜಿತೇಂದ್ರಿಯತ್ವದ ಹೆಚ್ಚಳದಿಂದಲೂ ವಜ್ರಪ್ರಾಯನಾಗಿದ್ದ ಚರಂತಪ್ಪನ ಕುತ್ತಿಗೆಯ ಮೇಲೆ ಆ ಕಡತದ ಪರಿಣಾಮವಾಗಲಿಲ್ಲ ಬಹು ಹದನಾದ ಆ ದೊಡ್ಡ ಕೊಯ್ತದ ಕಸುವಿನ ಕಡತದಿಂದ ಚರಂತಪ್ಪನ ಕುತ್ತಿಗೆಯ ಚರ್ಮವು ಕೂಡ ಹರಿಯಲಿಲ್ಲ ಸುಮ್ಮನೆ ಕುತ್ತಿಗೆಯ ಮೇಲೆ ಒಂದು ಗೆರೆ ಬಿದ್ದಂತೆ ಆಯಿತು. ಇದೇ ಕಡತವು ಮತ್ತೊಬ್ಬ ಸಾಮಾನ್ಯ ಮನುಷ್ಯನ ಕುತ್ತಿಗೆಗೆ ಬಿದ್ದಿದ್ದರೆ ಕ್ಷಣದಲ್ಲಿ ಕುತ್ತಿಗೆಯು ಕಡಿದು ಬೀಳುತ್ತಿತ್ತು. ಇಂಥ ಅಗಾಧವಾದ ಪೆಟ್ಟು ಆ ಮಹಿಮನಿಗೆ ತೃಣಪ್ರಾಯವಾಯಿತು. ಇದನ್ನು ನೋಡಿ ಸಂನ್ಯಾಸಿಯು ಬೆದರಿ ಮುಂದುಗಾಣದೆ ಸುಮ್ಮನೆ ನಿಂತುಕೊಂಡನು. ಮರುದಿನ ಚರಂತಪ್ಪನು ಊರಲ್ಲಿ ಹೋಗಿ ಜನರ ಮುಂದೆ ಬೇನೆಯ ನೆರಳುವಿಕೆಯ ಲಕ್ಷಣವನ್ನು ತೋರಿಸುತ್ತ, ಎಡಗೈಯನ್ನು ಅಂಗಯಿಂದ ಸುತ್ತಿಕೊಂಡು ಬಲಗೈಯಿಂದ ಅದನ್ನು ಹಿಡಕೊಂಡು ಕೂಡಿದ ಜನರ ಮುಂದೆ—ಎಲೇ, ಇದು ನೋಡಿರೋ, ಪುಟ್ಟಮುಲ್ಲನು ಕಡಿದಾನೆ, ಇದಕ್ಕೇನು ಮಾಡಬೇಕು ಹೇಳಿರೋ, ಎಂದು ಹೇಳುತ್ತ ಶಿರಸ್ಸಿನಲ್ಲಾದ ಗಾಯವನ್ನು ಮುಂಗೈಮೇಲೆ ತೆಗೆದುಕೊಂಡು ಬಾಧೆಪಡುವವನಂತೆ ನಟಿಸುತ್ತ ತಿರುಗಹತ್ತಿದನು. ತಿಳಿದ ಜನರು ಆ ತರುಣ ಸಂನ್ಯಾಸಿಯನ್ನು ಕೇಳಲು, ಆತನು—ನಾನೇನು ಬೇಕಾಗಿ ಕಡಿದವನಲ್ಲ ಅವನು "ನನ್ನನ್ನು ಕಡಿ, ಉಪದೇಶ ಸಿಗುತ್ತದೆ"ಂದು ಹೇಳಿದ್ದರಿಂದ ನಾನು ಕುತ್ತಿಗೆಗೆ ಹೊಡೆದಿರುವೆನಲ್ಲದೆ ಕೈಗೆ ಹೊಡದಿರುವದಿಲ್ಲ ಎಂದು ಹೇಳಿದನು. ಆಗ ಜನರೆಲ್ಲರು ಹೋಗಿ ಚರಂತಪ್ಪನ ಕುತ್ತಿಗೆಯನ್ನು ನೋಡಲು, ಚರ್ಮದಲ್ಲಿ ಒಂದು ಕೂದಲು ಪ್ರಮಾಣದ ರೇಷೆಯಿತ್ತಲ್ಲದ ಬೇರೆ ಗಾಯವೇನೂ ಇದ್ದಿಲ್ಲ. ಈ ಅದ್ಭುತಕೃತಿಯನ್ನು ನೋಡಿ ಜನರು ಆಶ್ಚರ್ಯಭರಿತರಾದರು. ಅಂದಿನಿಂದ ಆ ತರುಣಸಂನ್ಯಾಸಿಯು ಕಾಣದಂತಾದನು. ಆತನ ಹೆಸರೇ ಪುಟ್ಟಮುಲ್ಲಾಯ್ಯ.

## ೩ನೆಯ ಪ್ರಕರಣ—ಶೆಟ್ಟಿಯು ಯಾರಾಗಿದ್ದಾನು!

ಬರಿಯ ಅಲೌಕಿಕ ಕೃತಿಗಳನ್ನು ತೋರಿಸುತ್ತ ಜನರಲ್ಲಿ ಪ್ರತಿಷ್ಠೆಯನ್ನು ಪಡೆಯುವ ಇಚ್ಛೆಯು ಪೂರ್ಣಸ್ಥಿತಿಯನ್ನು ಹೊಂದಿದ ಕೆಲವು ಸತ್ಪುರುಷರಿಗಿರುವದಿಲ್ಲ, ಅವರು ಚಿತ್ತಹರಣ ಮಾಡಿ ಜನರನ್ನು ಸನ್ಮಾರ್ಗಕ್ಕೆ ಮಾತ್ರ ಹಚ್ಚಿದರೆ ಹಚ್ಚುವರು. ಚರಂತಪ್ಪನವರ ಸ್ಥಿತಿಯಾದರೂ ಹಾಗೆಯೇ ಇತ್ತೆಂಬದನ್ನು, ಅವರು ಉನ್ಮತ್ತಾಚರಣೆಯಿಂದ ಜನರ ನಗೆಗೂ, ಔದಾಸೀನ್ಯಕ್ಕೂ ಕಾರಣವಾದದ್ದರ ಮೇಲಿಂದ ವಾಚಕರು ಮನಗಾಣಬಹುದು, ಆದಂೂ ಒಚ್ಚಿಟ್ಟ ಕಸ್ತೂರಿಯ ವಾಸನೆಯು ಒಚ್ಚಿಡದಂತೆ, ಚರಂತಪ್ಪನವರ ಅಗಾಧಕೃತಿಗಳು ಒಮ್ಮೊಮ್ಮೆ ಸ್ವಾಭಾವಿಕವಾಗಿ ವ್ಯಕ್ತವಾಗುತ್ತಿದ್ದವು. ಬದುಕುವ ಆಶೆಯಿಲ್ಲದ ರೋಗಿಗಳ ಮೈಮೇಲೆ ಕೈಯಾಡಿಸಿ ಚಪ್ಪರಿಸಿ "ಏಳಲೊ" ಎಂದು ಎಷ್ಟೋ ಜನರನ್ನು ಚರಂತಪ್ಪನವರು ಬದುಕಿಸಿದರು. ಒಬ್ಬ ನೀಚನು ದುಷ್ಟತನದಿಂದ ಇವರಿಗೆ ರಕ್ಷಾಪ್ರಹಾರಮಾಡಲು, ಆತನ ಕಣ್ಣುಗಳೇ ಹೋದವು. ಇವರನ್ನು ಬಡಿದವರು ರೋಗಿಷ್ಠರಾದರು ಇವರನ್ನು ಪೀಡಿಸಿದವರ ಮನೆತನಗಳು ಏಳಿಗೆಯನ್ನು ಹೊಂದಲಿಲ್ಲ ಯಾರಾದರೂ ಮಕ್ಕಳನ್ನು ಎತ್ತಿಕೊಂಡು ಕುಳಿತಾಗ್ಗೆ ಚರಂತಪ್ಪನವರು ಅಕಸ್ಮಾತ್ತಾಗಿ ಹೋಗಿ ಆ ಮಕ್ಕಳನ್ನು ಪ್ರೇಮದಿಂದ ಮುದ್ದಿಟ್ಟು ಅವುಗಳ ಮೈಗೆ ಮಣ್ಣನ್ನು, ಇಲ್ಲವೆ ಬೂದಿಯನ್ನು ಹಚ್ಚಿಹೋದರೆಂದರೆ, ಆ ಹುಡುಗರು ರೋಗಪೀಡಿತರಾಗಿ ಮೃತಿಯನ್ನು ಹೊಂದುತ್ತಿದ್ದರು. ಯಾವಳೊಬ್ಬ ಮದುವೆಯಾಗದ ಹುಡುಗೆಯನ್ನು ಕರೆದು ಚರಂತಪ್ಪನವರು—ಮಗಳೇ, ಇಲ್ಲಿ ನಿಲ್ಲು, ಇದನ್ನು ಮೂಗಿನಲ್ಲಿ ಇಟ್ಟುಕೋ, ಎಂದು ಯಾವದಾದರೂ ವನಸ್ಪತಿಯ ಬೇರನ್ನು, ವಿಶೇಷವಾಗಿ ಕಳ್ಳಿಯ ಕುಡಿಯನ್ನು ಆಕೆಯ ಮೂಗಿನಲ್ಲಿ ಇಟ್ಟರೆಂದರೆ, ಆಗಲೇ ವರ್ಷ [illegible] ಹುಡುಗಿಯು [illegible] ಆಗುತ್ತಿತ್ತು, ಮಕ್ಕಳಿಲ್ಲದವರ ಮನೆಗೆ ಅವರು ಅಕಸ್ಮಾತ್ತಾಗಿ ಹೋಗಿ "ತಾಯೀ ರೊಟ್ಟೀ ನೀಡು" ಎಂದು ಕೇಳಿ ಭಿಕ್ಷೆನೀಡಿಸಿಕೊಂಡು "ಇಗೋ ನೋಡು, ಹೀಗೆ ಜೋಗಳ ಹಾಡಬೇಕು. ನಿನಗೆ ಜೋಗಳ ಹಾಡಲಿಕ್ಕೆ ಬರುತ್ತದೋ" ಎಂದು ನುಡಿದು ತಲೆಯಮೇಲೆ ಕೈಯಿಟ್ಟು ಹೋದರೆಂದರೆ ಮಕ್ಕಳಾಗುತ್ತಿದ್ದವು, ಬಡತನದಿಂದ ಕಷ್ಟಪಡುತ್ತಿರುವವರ ಮನೆಗೆ ಅಕಸ್ಮಾತ್ತಾಗಿ ಹೋಗಿ ತಮಗೆ ಬೇಕಾದವರನ್ನು ಹೆಸಗೊಂಡು ಕರೆದು "ಇಗೋ ಹಿಡಿ" ಎಂದು ಏನಾದರೂ ಕೈಯ

ಲ್ಲಿದ್ದದ್ದನ್ನು ಕೊಟ್ಟು "ಹೋಗು ಸುಖಿಯಾಗಿರು" ಎಂದರೆ, ಅವರು ಧನಿಕ ರಾಗುವರು. ಹೀಗೆ ಚರಂತಪ್ಪನವರು ಐಹಿಕಸುಖದೃಷ್ಟಿಯಿಂದ ಮಹತ್ವದವೂ, ತಮ್ಮ ಬ್ರಹ್ಮಜ್ಞಾನದ ದೃಷ್ಟಿಯಿಂದ ಕ್ಷುಲ್ಲಕವೂ ಆಗಿರುವ ಸಂಗತಿಗಳಿಂದ ಜನ ರನ್ನು ಆಶ್ಚರ್ಯಗೊಳಿಸುತ್ತಿದ್ದರು.

ತರುಣಸಂನ್ಯಾಸಿಯು ಹೋದಬಳಿಕ ಕೆಲವು ದಿನಗಳ ಮೇಲೆ ಚರಂತಪ್ಪ ನವರಿಗೆ ಗುರುದರ್ಶನದಲ್ಲಿ ಇಚ್ಛೆಯುಂಟಾಯಿತು ಅವರು ಗಂಜೀಗಟ್ಟಿಯಿಂದ ಹೊರಟು ಉರ್ವಕೊಂಡಿಗೆ ಹೋದರು. ಧಾರವಾಡ ಜಿಲ್ಲೆಯೊಳಗಿನ ಗಂಜೀಗ ಟ್ಟಿಗೂ, ಮೈಸೂರ ಸೀಮೆಯಲ್ಲಿರುವ ಉರ್ವಕೊಂಡಿಗೂ ಹಲವು ಗಾವುದಗಳ ಅಂತರವಿರುವದು. ಸದ್ಗುರುವು ವಾಸಿಸುತ್ತಿದ್ದದರಿಂದ ಉರ್ವಕೊಂಡಿಯು ಪವಿ ತ್ರ—ಕ್ಷೇತ್ರವೆನಿಸುತ್ತಿತ್ತು ಮಠದ ವಿನಿಯೋಗಕ್ಕೆ ಮೈಸೂರ ಕೃಷ್ಣರಾಜ ಒಡೆಯರವರು ತಿಂಗಳೊಂದಕ್ಕೆ ಕೆಲವು ಧನಸಹಾಯದ ಏರ್ಪಾಟನ್ನು ಮಾಡಿ ಕೊಟ್ಟಿರುವರು ಅದು ಈಗ್ಯೂ ಸ್ಥಿರವಾಗಿ ನಡೆಯುತ್ತಿರುವದು ಈ ರಾಜಾ ಶ್ರಯವಲ್ಲದೆ, ಶಿವಯೋಗಿ ದೇಶಿಕರ ತಪಸಿದ್ಧಿಯಿಂದ ಭಕ್ತಸಮೂಹವು ತಮ್ಮ ಇಷ್ಟಾರ್ಥಗಳನ್ನು ಪ್ರಾರ್ಥಿಸಿಕೊಳ್ಳುವದಕ್ಕಾಗಿ ಮಠಕ್ಕ ಒಂದು ಏನಾದರೂ ಕಾಣಿಕೆಯನ್ನು ಕೊಡುತ್ತಿತ್ತು ಮಠದ ವ್ಯವಸ್ಥೆಯನ್ನು ಸದಾಶಿವನೆಂಬ ಶಿಷ್ಯನು ನೋಡಿಕೊಳ್ಳುತ್ತಿದ್ದನು ಈತನೇ ನಮ್ಮ ಚರಿತ್ರನಾಯಕನಾದ ಸಾಧುಸದಾಶಿ ವನು. ಆ ಪುಣ್ಯಾಶ್ರಮದಲ್ಲಿ ಶಿವಭಜನೆ, ಶಿವಕಥಾಶ್ರವಣ, ಅದ್ವೈತಶಾಸ್ತ್ರವಿವೇ ಚನ, ಅನ್ನದಾನ ಮೊದಲಾದ ಜನ್ಮಸಾರ್ಥಕದ ಕಾರ್ಯಗಳು ನಡೆಯುತ್ತಿದ್ದವು. ಚರಂತಪ್ಪನವರು ಗುರುಸನ್ನಿಧಿಯನ್ನು ಹೊಂದಿ ಸಾಷ್ಟಾಂಗನಮಸ್ಕಾರಾದಿಗ ಳಿಂದ ಸೇವೆಮಾಡಲು, ಗುರುಗಳು ತಮ್ಮ ಮಠದಲ್ಲಿದ್ದ ಸದಾಶಿವನನ್ನು ಕುರಿತು— ಎಲೈ, ನೀನು ಯಾವ ಗುರೂಪದೇಶವನ್ನಾಶಿಸಿ ಇಷ್ಟುದಿವಸ ಸ್ಥಾನವನ್ನು ಕಾಯ್ದುಕೊಂಡು ಇದ್ದೆಯೋ, ಆ ಉಪದೇಶವು ನನ್ನ ಸ್ವರೂಪನಾಗಿದ್ದ ಈ ಶಂಭುಲಿಂಗನಿಂದ ಇನ್ನು ಕೆಲವುದಿನಗಳ ಮೇಲೆ ನಿನಗೆ ದೊರೆಯುವದು. ವಾರ್ಧಕ್ಯದ ಮೂಲಕ ಇಂದ್ರಿಯಪಾಟವವು ಕಡಿಮೆಯಾಗಿರುವ ನನ್ನಿಂದ ನಿನಗೆ ಉಪದೇಶವು ದೊರೆಯಲಿಕ್ಕೆ ಆಸ್ಪದವಿಲ್ಲ. ಇಷ್ಟಾರ್ಥಸಿದ್ಧಿಯ ಬಗ್ಗೆ ನೀನು ಚಿಂತಿ ಸಬೇಡ. ನೀವಿಬ್ಬರು ನನ್ನ ಉತ್ತರಕ್ರಿಯೆಗಳನ್ನು ಮಾಡಿ ನಿಮ್ಮ ನಿಮ್ಮ ಆನಂದದ ಸ್ಥಳಗಳನ್ನು ಹೊಂದಿರಿ, ಎಂದು ಹೇಳಿ, ಗುರುಗಳು ದೇಹವನ್ನು ನೀಗಿದರು. ಆ ಮೇಲೆ ಅವರಿಬ್ಬರು ಶಿಷ್ಯೋತ್ತಮರು ಭಕ್ತರ ಸಹಾಯದಿಂದ ಉತ್ತರಕ್ರಿಯೆ

ಗಳನ್ನು ಮುಗಿಸಿ, ಸಮಾಧಿಯನ್ನು ಕಟ್ಟಿಸಿ ಸಮಾರಾಧನೆಗಳನ್ನು ಮಾಡಿದರು. ಇಷ್ಟಾದರೂ ಅವರಿಬ್ಬರು ಶಿಷ್ಯರು ಪರಸ್ಪರರಲ್ಲಿ ಮಾತಾಡಿದ್ದಿಲ್ಲ. ಕೆಲವುದಿನಗಳ ಮೇಲೆ ಸದಾಶಿವನು ನಿತ್ಯಕ್ರಮದಂತೆ ಉಷಃಕಾಲಕ್ಕೆ ಎದ್ದು ನೋಡಲು, ನಮ್ಮ ಶಂಭುಲಿಂಗಚರಮೂರ್ತಿಗಳು ಸದಾಶಿವನ ಕಣ್ಣಿಗೆ ಬೀಳಲಿಲ್ಲ

ತನ್ನ ಉಪದೇಶಕರ್ತೃವು ಇಲ್ಲದ ಹಾಗೆ ಆದದ್ದನ್ನು ನೋಡಿ ಸದಾಶಿವನಿಗೆ ಬಹಳ ಅಸಮಾಧಾನವಾಯಿತು ಇಂದು ಒಂದಾನು ನಾಳೆ ಬಂದಾನು ಎಂದು ನಾಲ್ಕಾರುದಿವಸಗಳ ವರೆಗೆ ಹಾದಿಯನ್ನು ನೋಡಿ ಆತನು ನಿರಾಶೆಪಟ್ಟನು. ಕಡೆಗೆ ತಾನೇ ಆತನನ್ನು ಕಾಣಬೇಕೆಂದು ಪ್ರಯಾಣ ಸಿದ್ಧನಾಗಿ ದಂಡಕಮಂಡಲು ಕಾಷಾಯಾಂಬರಗಳನ್ನು ತಕೊಂಡು ಗುರುಗಳ ಗದ್ದಿಗೆಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ಆಶೀರ್ವಾದರೂಪವಾಗಿ ಭಸ್ಮವನ್ನು ಧರಿಸಿ, ಪ್ರಸಾದವನ್ನು ಸ್ವೀಕರಿಸಿ ಹೊರಟನು. ಮೊದಲು ಆತನು ತನ್ನ ಜನ್ಮಸ್ಥಳವಾದ ಮೈಸೂರಿಗೆ ಹೋಗಿ ಒಂದೆರಡು ದಿನ ಅಲ್ಲಿ ನಿಂತನು ಪುನಃ ಆತನು ಗುರುವಚನವನ್ನು ಸ್ಮರಿಸಿ ಶಂಭುಲಿಂಗ ಗುರುವರನನ್ನು ಹುಡುಕುತ್ತ ನಂಜನಗೂಡು, ಚಾಮುಂಡಾಚಲ, ಸಿದ್ಧಗಂಗಾಬೆಟ್ಟ, ಶಂಭುಲಿಂಗನಬೆಟ್ಟ ಮೊದಲಾದ ಪವಿತ್ರ ಸ್ಥಳಗಳಲ್ಲಿ ಹುಡುಕುತ್ತ ತಿರುಗಿ ತಿರುಗಿ ದಣಿದನು, ಆದರೂ ಗುರುವಿನ ಗೊತ್ತುಹತ್ತಲಿಲ್ಲ, ಅದರಿಂದ ಆತನಿಗೆ ಅಸಮಾಧಾನವಾಯಿತು ಆತನು ಬೇಸರಿಯದೆ ಮತ್ತೆ ಹಲವು ಪವಿತ್ರ ಸ್ಥಳಗಳನ್ನು ತಿರುಗಿದನು. ಅಲ್ಲಿಯೂ ಗುರುವಿನ ಗೊತ್ತು ಹತ್ತದ್ದರಿಂದ ಆತನಿಗೆ ಬಹಳ ಅಸಮಾಧಾನವಾಯಿತು ಸದಾಶಿವನು ಹಾಗೇ ಸಂಚರಿಸುತ್ತ ತನ್ನ ಜಿತೇಂದ್ರಿಯತ್ವದ ಸತ್ವವನ್ನೂ, ಶಿವೋಪಾಸನೆಯ ನಿಶ್ಚಲತೆಯನ್ನೂ, ಪರಬ್ರಹ್ಮವಿಚಾರದ ಹವ್ಯಾಸವನ್ನೂ ಜಗತ್ತಿನಲ್ಲಿ ತೋರಿಸಿ ಮೆರೆಯುತ್ತ, ಅಲ್ಲಲ್ಲಿ ಹಲವು ಸದ್ಭಕ್ತರ ಇಷ್ಟಾರ್ಥಗಳನ್ನು ಪೂರೈಸುತ್ತ ಸಂಚರಿಸುತ್ತಿರಲು, ಈತನ ಮನೋನಿಶ್ಚಯವನ್ನೂ, ಗುರುದರ್ಶನದ ಅಭಿಲಾಷೆಯನ್ನೂ ಅರಿತ ಜಗದೀಶ್ವರನು ಈತನ ಚಿಂತಾಪರಿಹಾರಾರ್ಥವಾಗಿ ಒಂದು ಲೀಲೆಯನ್ನು ಪ್ರಕಟಿಸಬೇಕಾಯಿತು. ಅದೇನಂದರೆ,

ಮಹನೀಯನಾದ ಸದಾಶಿವನು ತನ್ನ ಗುರುವನ್ನು ಹುಡುಕುತ್ತ ಸಾಗಿರಲು, ಒಂದು ನದಿಯು ಹತ್ತಿತು. ಅಲ್ಲಿಗೆ ಬರುವದರೊಳಗಾಗಿ ಸದಾಶಿವನು ಬಹಳ ಕಂಗಾಲಾಗಿದ್ದನು. ಆತನಿಗೆ ಎರಡು ದಿನಗಳಿಂದ ಅನ್ನವಿದ್ದಿಲ್ಲ. ಮಾಘಮಾಸದ ಬಿಸಿಲಿನಿಂದ ಆತನು ಬೆಂದು ಹೋಗಿದ್ದನು. ಅಂಥ ಸ್ಥಿತಿಯೂ ಆತನು

ಮನಸ್ಸನ್ನು ಚಂಚಲವಾಡದೆ ನದಿಯಲ್ಲಿ ಸ್ನಾನವಾಡಿ ನದೀಮಧ್ಯದಲ್ಲಿದ್ದ ಒಂದು ಬಂಡೆಗಲ್ಲಮೇಲೆ ಕುಳಿತು ವಿಧ್ಯುಕ್ತವಾಗಿ ಭಕ್ತಿಯಿಂದ ಶಿವಪೂಜೆಯನ್ನು ಮಾಡಿದನು ಪೂಜೆಯು ಮುಗಿದ ಮೇಲೆ ಇಷ್ಟಾರ್ಥವನ್ನು ಬೇಡುವ ಕಾಲದಲ್ಲಿ ನಿರಾಹಾರಕ್ಕಾಗಿಯೂ, ಗುರುದರ್ಶನವಿಲ್ಲದ ತಾಪಕ್ಕಾಗಿಯೂ ಒಮ್ಮೆಲೆ ಗಟ್ಟಿಯಾಗಿ "ಶಂಭೋ" ಎಂದು ಕೂಗಲು, ತತ್ಕಾಲದಲ್ಲಿಯೇ ಆಕಾಶದಲ್ಲ "ಶಂಭೋ" ಎಂಬ ಪ್ರತಿಧ್ವನಿಯು ಉಂಟಾಯಿತು. ಸದಾಶಿವನು ಅದನ್ನು ಚಿತ್ತವಿಟ್ಟು ಕೇಳಿ ಅದನ್ನೇ ಮನಸ್ಸಿನಲ್ಲಿ ಎಣಿಕೆಮಾಡುತ್ತ, ಇಷ್ಟಲಿಂಗವನ್ನು ಕರಡಿಗೆಯಲ್ಲಿಟ್ಟು, ಇನ್ನು ಪ್ರಯಾಣಸನ್ನದ್ಧನಾಗಬೇಕೆನ್ನುವಷ್ಟರಲ್ಲಿ, ಒಂದು ಹರಕ ಸಂರದ ಬಡಕ ಎತ್ತು ಬೆನ್ನ ಮೇಲಿನ ಭಾರದಿಂದ ಕುಸಿದು ನಡಿಯುಲಾರದೆ ಮೆಲ್ಲಗೆ ಹೆಜ್ಜೆಯನ್ನು ಹಾಕುತ್ತ ಸದಾಶಿವನು ಕುಳಿತಿದ್ದ ಬಂಡೆಯ ಸಮೀಪಕ್ಕೆ ಬಂದಿತು ಅದರ ಹಿಂದಿನಿಂದ ಒಬ್ಬ ಬಣಜಿಗನು ಬರುತ್ತಿದ್ದನು. ಆತನು ತಲೆಗೆ ಒಂದು ಹರಕ ವಸ್ತ್ರವನ್ನು ಸುತ್ತಿ, ಮೈಯಲ್ಲಿ ಒಂದು ಹರಕ ನಿಲುವಂಗಿಯನ್ನು ತೊಟ್ಟಿದ್ದನು. ಆತನಿಗೆ ೪೫।೫೦ ವರ್ಷವಾಗಿರಬಹುದು. ಎತ್ತಿನ ಮೇಲೆ ಬುತ್ತಿಯ ಗಂಟು ಇತ್ತು. ಎತ್ತು ಬಂಡೆಯ ಸಮೀಪದಲ್ಲಿ ನಿಂತು ನೀರು ಕುಡಿಯುತ್ತಿರುವಾಗ, ಅದರ ಮೇಲಿನ ಬುತ್ತಿಯ ಗಂಟು ಸದಾಶಿವನ ಕಣ್ಣಿಗೆ ಬಿದ್ದಿತು. ಅದನ್ನು ನೋಡಿದ ಬಳಿಕಂತು ಸದಾಶಿವನ ಹಸಿವೆಯು ಮತ್ತಿಷ್ಟು ಹೆಚ್ಚಿತು. ಅಷ್ಟರಲ್ಲಿ ಬಣಜಿಗನು ಅಲ್ಲಿಗೆ ಬಂದು ಬಂಡೆಯ ಮೇಲ ಕುಳಿತಿರುವ ತಪೋಧನನನ್ನು ನೋಡಿ ಭಯಭಕ್ತಿಯಿಂದ ನಮಸ್ಕರಿಸಿ, "ಸ್ವಾಮಿ, ತಮ್ಮ ಸ್ಥಳವಾವದು?" ಎಂದು ಎರಡು ಉಪಚಾರದ ಮಾತುಗಳನ್ನು ಆಡಿದನು. ಆ ಮೇಲೆ ಆ ಬಣಜಿಗನು ಸ್ನಾನ ಮಾಡಿ ಬಂದು, ಎತ್ತಿನ ಮೇಲಿನ ಬುತ್ತಿಯ ಗಂಟನ್ನು ಬಿಚ್ಚಿ ಅದರೊಳಗಿನ ಅರ್ಧ ಬುತ್ತಿಯನ್ನು ಸದಾಶಿವನಿಗೆ ಕೊಟ್ಟನು. ಅಷ್ಟರಿಂದ ಸದಾಶಿವನ ಹೊಟ್ಟೆತುಂಬದಾಗಲು, ಆ ಭಾವವನ್ನು ತಿಳಿದು ಬಣಜಿಗನು ಮತ್ತಿಷ್ಟು ಬುತ್ತಿಯನ್ನು ಕೊಟ್ಟನು. ಅದರಿಂದ ಸದಾಶಿವನು ತೃಪ್ತನಾದ ಮೇಲೆ ಉಳಿದ ಬುತ್ತಿಯನ್ನು ಬಣಜಿಗನು ತಿಂದು ತೃಪ್ತನಾದನು

ಮಹಿಮಾಶಾಲಿಯಾದ ಸದಾಶಿವನು ಭೋಜನಾನಂತರ ತನ್ನ ಚಿಲುಮೆಯನ್ನು ನದಿಯಲ್ಲ ಸ್ವಚ್ಛವಾಗಿ ತೊಳೆದು ತಂಬಾಕವನ್ನು ಹಾಕಿ ಸೇದಿ ಆನಂದ ಮಗ್ನನಾಗಿ ಕುಳಿತಿರಲು, ಬಣಜಿಗನು—ಸ್ವಾಮಿ, ನಾನು ಹೋಗುತ್ತೇನೆ. ನನ್ನ ಗ್ರಾಮವು ಇದೇ ಇಲ್ಲಿ ಸಮೀಪದಲ್ಲಿ ಕಾಣುತ್ತದೆ. ಸ್ವಾಮಿಗಳು ಸಂಜೆಗೆ

ನನ್ನ ಮನೆಗೆ ದಯಮಾಡಿಸಿ ಬಡಭಕ್ತನನ್ನು ಉದ್ಧಾರ ಮಾಡಬೇಕು, ಎಂದು ಬೇಡಿಕೊಳ್ಳಲು, ಸದಾಶಿವನು ಸಿಟ್ಟಿನಿಂದ—ಎಲೋ, ಮಾಯಾಲಿಪ್ತವಾದ ನಿನ್ನ ಅನ್ನವು ನನ್ನ ಮೇಲೆ ನಿನ್ನ ಸಾಮರ್ಥ್ಯವನ್ನು ಇಷ್ಟು ನಡೆಯಿಸಿತಷ್ಟೇ? ಆ ಅನ್ನವನ್ನೇ ನಾನು ಸ್ವೀಕರಿಸದಿದ್ದರೆ, ನಿನ್ನಿಂದ ಇಷ್ಟು ಸಾಮರಸ್ಯವಾದ ಪ್ರೇಮ ಯುಕ್ತ ಭಾಷಣವು ಹ್ಯಾಗೆ ಹೊರಡುತ್ತಿತ್ತು? ಅಹುದಹುದು, ಮಾಯಾವಿಷ ಯವಾ ಅಂಥವದ್ದು ಮನೆಗೆ ಬರುವದಿಲ್ಲ ಹೋಗು, ಎಂದು ಗರ್ಜಿಸಿದನು. ಆಗ ಬಣಜಿಗನು ಭಯದಿಂದ ಸಮಸ್ಕರಿಸಿ—ಸ್ವಾಮೀ, ತಪ್ಪಾಯಿತು. ಅಪರಾಧ ವನ್ನು ಕ್ಷಮಿಸಬೇಕು, ಎಂದು ಪ್ರಾರ್ಥಿಸಿ ಆಶೀರ್ವಾದ ಹೊಂದಿ ತನ್ನ ಬಡ ಎತ್ತನ್ನು ಹೊಡಕೊಂಡು ಮೆಲ್ಲ ಮೆಲ್ಲನೆ ಊರಹಾದಿಯನ್ನು ಹಿಡಿದನು. ಇತ್ತ ಬಂಡೆಯ ಮೇಲೆ ಕುಳಿತಿದ್ದ ಸದಾಶಿವನು ಮನಸ್ಸಿನಲ್ಲಿ—ಅಹಾ! ಪರಮಾತ್ಮನ ಲೀಲೆಯು ಅಗಾಧವಾದದ್ದು! ನೋಡಿದೆಯಾ? ಅನ್ನವಿಲ್ಲದೆ ಬಳಲುತ್ತಿದ್ದ ನನಗೆ ದೇವರು ಅನ್ನವನ್ನು ಕೊಟ್ಟು ಸಂತೋಷಗೊಳಿಸಿದನು. ಆ ಬಡ ಭಕ್ತನಾದ ಬಣಜಿಗನ ಭಕ್ತಿಯು ಸಫಲವಾಯಿತು ನಾನು ಆತನ ಬಯಕೆಯನ್ನು ಪೂರ್ಣ ಮಾಡದೆ ಸಿಟ್ಟಿನಿಂದ ಬೈದು ಹಾಗೇ ಕಳಿಸಿ ಆತನ ಚಿತ್ತಕ್ಕೆ ವ್ಯಾಕುಲವನ್ನುಂಟು ಮಾಡಿದೆನಲ್ಲ! ಎಂದು ಆಲೋಚಿಸಿ "ಹ್ಯಾಗೇ ಆಗಲಿ, ಸಂಜೆಗೆ ಆತನ ಊರಿಗೆ ಹೋಗಿ ಇಂದಿನರಾತ್ರಿ ಆತನ ಮನೆಯಲ್ಲಿದ್ದು ಮುಂದಕ್ಕೆ ಪ್ರಯಾಣ ಬೆಳಿಸ ತಕ್ಕದ್ದು" ಎಂದು ನಿಶ್ಚಯಿಸಿ, ತನ್ನ ದಂಡ-ಕಮಂಡಲುಗಳನ್ನು ತಕ್ಕೊಂಡು ಊರ ಹಾದಿಯನ್ನು ಹಿಡಿದನು. ಬಣಜಿಗನು ನಡೆಯಲಾರದ ಎತ್ತನ್ನು ಹೊಡ ಕೊಂಡು ಇಲ್ಲಿಯೇ ಹೋಗುತ್ತಿರಬಹುದೆಂದು ಸದಾಶಿವೇಂದ್ರನು ಬತ್ತರದಿಂದ ಸಾಗಿದನು. ಎರಡು ಮೈಲು ನಡೆದು ಹೋದರೂ ಬಣಜಿಗನು ಕಾಣಲಿಲ್ಲ. ಬೇರೆ ಮಾರ್ಗದಿಂದ ಹೋಗಿರಬಹುದೆಂದು ಸಮಾಧಾನಮಾಡಿಕೊಂಡು ಸದಾಶಿ ವೇಂದ್ರನು ಆ ಊರಿಗೆ ಹೋಗಿ ವಿಚಾರಿಸಲು, "ಶರಣಪ್ಪನವರ ಲಿಂಗಪ್ಪಶೆಟ್ಟಿ" ಎಂಬವನು ಈ ಊರಲ್ಲಿರುವದೊತ್ತಟ್ಟಿಗಿರಲಿ, ಈ ಊರಲ್ಲಿ ಲಿಂಗಾಯತರ ಮನೆ ಗಳೇ ಇಲ್ಲೆಂದು ಜನರು ಹೇಳಿದರು. ಆಗ ಸದಾಶಿವೇಂದ್ರನು—ಅಹಾ! ಇದೇನು ಚಮತ್ಕಾರವು! ಈಶ್ವರನ ಲೀಲೆಯು ಯಾರಿಗೂ ತಿಳಿಯದು. ಆ ಸೆಟ್ಟಿಯು ಯಾರಾಗಿದ್ದಾನು? ಎಂದು ಯೋಚಿಸುತ್ತ ಒಂದು ದೇವಾಲಯದಲ್ಲಿ ಅಂದಿನ ರಾತ್ರಿಯನ್ನು ಕಳೆದನು.

---

## ೪ನೆಯ ಪ್ರಕರಣ—ಮಹಾತ್ಮರ ಡೊಳ್ಳು.

———[.೦.]———

ಈ ಕಾಲದಲ್ಲಿ ಸದಾಶಿವೇಂದ್ರರ ವೀರಶೈವಧರ್ಮದ ಕರ್ಮಾಚಾರಗಳೆಲ್ಲ ಬಹಿರಂಗದಲ್ಲಿ ವಿಶೇಷವಾಗಿ ತೋರದೆ, ಇಷ್ಟಲಿಂಗ-ಸ್ನಾನ-ಭಸ್ಮಧಾರಣಗಳ ಮಟ್ಟಿಗೆ ಇದ್ದು, ಇತರ ವಿಷಯದ ಆಚಾರಗಳೆಲ್ಲ ಅಂತರ್ಯವನ್ನೇ ಸೇರಿದ್ದವು. ಗುರುಮೂರ್ತಿಧ್ಯಾನದಿಂದ ಅವರ ಮನಸ್ಸು ಸ್ಥಿರವಾಗಿತ್ತಲ್ಲದೆ, ಗಾಂಜಿಯನ್ನು ಸೇದುತ್ತಿದ್ದದರಿಂದ ವಿಶೇಷ ಮಾತಾಡದೆ ಅವರು ಮೌನವಾಗಿರುತ್ತಿದ್ದರು. ತಮ್ಮ ತಪೋಬಲದಿಂದ ತಾವು ಕುಳಿತ ಸ್ಥಳದಲ್ಲಿ, ಬಂದ ಜನರ ಅನ್ನೋದಕಗಳು ನಡೆಯುತ್ತಿದ್ದರೂ. ಅದರ ಕಡೆಗೆ ಲಕ್ಷ್ಯಗೊಡದೆ ತಮ್ಮ ಧ್ಯಾನವೇ ತಾವಾಗಿ ಅಸಂತುಷ್ಟತೆಯಿಂದ ಗುರುಧ್ಯಾನ ತತ್ಪರರಾಗಿರುತ್ತಿದ್ದರು. ಧ್ಯಾನಸ್ಥರಾಗಿರುವಾಗ್ಗೆ ಯಾರಾದರೂ ಬಂದು ಗದ್ದಲಮಾಡಿದರೆ, ಕೋಪಿಸಿ ತತ್ಕಾಲದಲ್ಲಿ ಅವರನ್ನು ಹೊರಗೆ ಹೊರಡಿಸುತ್ತಿದ್ದರು. ಧರ್ಮದ್ರೋಹಿಗಳಾಗಿ ವಿಚಾರವಿಲ್ಲದ ಬಾಯಬಡಕರಾಗಿ, ದುಡಿಯಲಾರದೆ ನಾಲ್ಕು ತತ್ವದ ಪದಗಳನ್ನು ಕಲಿತು ಕೊಂಡು ಗಾಂಜಿಸೇದುವವರ ಹತ್ತರಹೋಗಿ "ಅಪ್ಪ, ಅಪ್ಪ," ಎಂದು ಎರಡು ವೇದಾಂತದ ಮಾತುಗಳನ್ನಾಡಿ ವೇದಾಂತಿಗಳಂತೆ ನಟಿಸುವವರನ್ನು ಅವರು ಹತ್ತರ ಬರಗೊಡುತ್ತಿದ್ದಿಲ್ಲ ಅಂಥವರನ್ನು ಕಂಡಕೂಡಲೆ ಮುಖಭಂಗಿತರನ್ನು ಮಾಡಿ ಹೊರಹೊರಡಿಸುವದು ಅವರ ಮೊದಲನೆಯ ಕೆಲಸವಾಗಿತ್ತು. ಯಾವ ಧರ್ಮ-ಕುಲ-ಗೋತ್ರಾದಿಗಳಿಗೂ ಕೇಡುಬಗೆಯದೆ, ಅವುಗಳನ್ನು ಹಳಿಯದೆ, ಆಯಾಧರ್ಮತತ್ವಗಳಂತೆ ನಡೆಯಲಿಕ್ಕೆ ಆಯಾಧರ್ಮದವರಿಗೆ ಹೇಳುತ್ತ ಮಹಾ ಅನ್ನದಾತೃಗಳಾಗಿ, ತ್ಯಾಗದಲ್ಲಿ ರಾಜಯೋಗಿಯೆನಿಸಿ, ಮಹಾತೇಜಃಪುಂಜರಾಗಿ, ದೂರದೃಷ್ಟಿ-ದೂರಶ್ರವಣ-ಅಂತರ್ಗಮನ-ಹಸ್ತಸಿದ್ಧಿ-ವಾಕ್ಸಿದ್ಧಿ ಮೊದಲಾದ ಸಿದ್ಧಿಗಳುಳ್ಳವರಾಗಿ ಮೆರೆಯುತ್ತ, "ಕರತಲಭಿಕ್ಷೆ ತರುತಲವಾಸ"ವೆಂಬ ತಮ್ಮ ಸಂನ್ಯಾಸ ಧರ್ಮವನ್ನು ಆಚರಿಸುತ್ತ ಭೂಮಿಯಲ್ಲಿ ಸಂಚರಿಸಹತ್ತಿದರು. ಮೇಲೆಹೇಳಿದ ಸಿದ್ಧಿಗಳೆಲ್ಲ ಇಲ್ಲಿಯವರೆಗೆ ಗುಪ್ತವಾಗಿದ್ದದರಿಂದಲೇ ಆ ಯತಿವರನು ಇಷ್ಟು ಕಷ್ಟಪಟ್ಟನು. ಇಲ್ಲದಿದ್ದರೆ ಉಪವಾಸದಿಂದ ಕಷ್ಟಪಡಲಿಕ್ಕೆ ಕಾರಣವೇನು? ನೆಟ್ಟಿಯ ರೂಪದಿಂದ ಪರಮೇಶ್ವರನು ಕೊಟ್ಟ ಬುತ್ತಿಯು ಹೊಟ್ಟೆಯಲ್ಲಿ ಬಿದ್ದಕೂಡಲೆ ಸಿದ್ಧಿಗಳು ಪ್ರಕಟವಾದವು. ಆದರೂ ತಮ್ಮ ಕರತಲಭಿಕ್ಷೆಯ ಧರ್ಮವನ್ನು ಅವರು ಬಿಟ್ಟಿದ್ದಿಲ್ಲ

ಈ ಮೇರೆಗೆ ಸದಾಶಿವೇಂದ್ರರಿಗೆ ಈಶ್ವರ ಕೃಪೆಯಿಂದ ಅಷ್ಟಸಿದ್ಧಿಗಳು ಪ್ರಾಪ್ತವಾಗಿದ್ದರೂ, ಅವರಿಗೆ ಎಳ್ಳಷ್ಟು ಸಮಾಧಾನವಿದ್ದಿಲ್ಲ ಗುರೂಪದೇಶವಾಗದ್ದರಿಂದಲೂ, ಉಪದೇಶಕನಾದ ಗುರುವು ಎಷ್ಟು ಹುಡುಕಿದರೂ ಸಿಗದ್ದರಿಂದಲೂ ಅವರ ಅಂತರಾತ್ಮನು ತಳಮಳಿಸುತ್ತಿದ್ದನು, "ಏನಿದೋಡೇನು ನಿಜ ಬೋಧೆಯೊಂದಿಲ್ಲದೊಡೆ | ಕಾನನದ ಬೆಳದಿಂಗಳಂತೆ ನಿಷ್ಫಲವು||" ಎಂಬ ಮಹಾ ಶಿವಯೋಗಿಗಳ ವಾಕ್ಯವು ಹೆಜ್ಜೆ ಹೆಜ್ಜೆಗೆ ಎದುರಿನಲ್ಲಿ ಬಂದು ನಿಂತು ಇವರಿಗುಂಟಾದ ಸೌಖ್ಯದ ಇಮ್ಮಡಿ ದುಃಖವನ್ನು ಉಂಟುಮಾಡುತ್ತಿತ್ತು. ಹೀಗೆ ಅಂತರಂಗದಲ್ಲಿ ಚಿಂತಾಕ್ರಾಂತರಾಗಿ ಗುರುವರನ ದರ್ಶನದಲ್ಲಿ ಉತ್ಸುಕರಾಗಿ ಸಂಚರಿಸುತ್ತ ಸೊಂಡೂರೆಂಬ ಪುಣ್ಯಸ್ಥಳಕ್ಕೆ ಬಂದು, ಅಲ್ಲಿ ಕಾರ್ತಿಕೇಯ ಮಹಾಸ್ವಾಮಿಯ ದರ್ಶನವನ್ನುತಕೊಂಡು, ಅಲ್ಲಿ ಸಾಧು-ಸತ್ಪುರುಷರಿರುವ ಪುಣ್ಯಾಶ್ರಮಗಳಲ್ಲಿ ನೋಡಿ ಅಲ್ಲಿಯೂ ಗುರುವು ಕಾಣದಿರಲು, ಹಾಗೆಯೇ ಹೊರಟು ಶ್ರೀಶೈಲ, ಕಂಚಿ, ಕಾಶಿ, ಕೇದಾರ, ತ್ರ್ಯಂಬಕೇಶ್ವರ ಮೊದಲಾದ ಕ್ಷೇತ್ರಗಳನ್ನು ನೋಡಿ ಅನೇಕ ದೇಶಗಳನ್ನು ಸಂಚರಿಸಿ ಪಂಪಾಕ್ಷೇತ್ರಕ್ಕೆ ಬಂದರು. ಅವರು ವಿರೂಪಾಕ್ಷನ ದೇವಾಲಯದಲ್ಲಿ ಕುಳಿತು ಧ್ಯಾನತತ್ಪರರಾಗಿ—ಭೋ, ಶಂಭೋ, ಸ್ವಾಮಿ, ನನ್ನ ಬಳಲುವಿಕೆಯನ್ನು ನಿವಾರಿಸಿ ನನಗೆ ಅನುಗ್ರಹ ಮಾಡುವದು ನಿನಗೂ ಅಸಾಧ್ಯವಾಯಿತೇ? ದೇವಾ, ನಾನು ಯಾರೆಂಬದನ್ನು ನೀನು ಅರಿಯೆಯಾ? ಎಂದು ಸಂತಾಪಪರವಾದ ದೈನ್ಯೋಕ್ತಿಗಳನ್ನು ನುಡಿದು ಮಲಗಿರಲು, ಅಂದಿನರಾತ್ರಿಯಲ್ಲಿ ಅವರಿಗೊಂದು ಸ್ವಪ್ನವುಬಿದ್ದಿತು ಸ್ವಪ್ನದಲ್ಲಿ—ಎಲೇ ಯತೀ, ಏಳು ಏಳು, ನೀನು ಬುತ್ತಿಯನ್ನು ತಿಂದು ನನ್ನ ಆಗ್ರಹವಚನವನ್ನು ಉಲ್ಲಂಘಿಸಿದ್ದರಿಂದ ಈ ಪರಿಯಾಗಿ ಕಷ್ಟಪಡಬೇಕಾಯಿತು ಅಷ್ಟಸಿದ್ಧಿಗಳೊದಗಿದರೂ ನಿನಗೆ ಸಮಾಧಾನವಿಲ್ಲ. ಇನ್ನು ಸ್ವಲ್ಪ ದಿನಗಳಲ್ಲಿ ನಿನ್ನ ಇಷ್ಟಯು ಪೂರ್ಣವಾಗುವದು." ಎಂಬ ವಾಕ್ಯವು ತನ್ನ ಗುರುವಿನ ವಾಕ್ಯದಂತೆ ಅನುಭವಕ್ಕೆ ಬರಲು, ಸದಾಶಿವೇಂದ್ರರು ತಟ್ಟನೆ ಎದ್ದು ಶಿವಧ್ಯಾನಾಸಕ್ತರಾಗಿ, ಉಮಾಮಹೇಶ್ವರನನ್ನು ನೋಡಿ ಮುಖಪ್ರಕ್ಷಾಲನಗೆಯ್ದು ತಮ್ಮ ಚಿದಾನಂದವೆಂಬ ಚಿಲಿಮೆಯ ಸೇವನಮಾಡಿ ಅಲ್ಲಿಂದ ಹೊರಟು ಇತರ ಕ್ಷೇತ್ರಗಳಾದ ಗೋಕರ್ಣ-ಉಡಿಪಿ-ಧರ್ಮಸ್ಥಲ-ಮಲಯಾದ್ರಿ ಮೊದಲಾದ ಸ್ಥಳಗಳನ್ನು ನೋಡಿ, ಹಾಗೇ ಪೂರ್ವ ದಿಕ್ಕಿಗೆ ಸಾಗಿ ಧಾರವಾಡ ಪ್ರಾಂತವನ್ನು ಸೇರಿ ಕಾಗಿನೆಲ್ಲಿ ಎಂಬ ಗ್ರಾಮಕ್ಕೆ ಬಂದರು.

ಸದಾಶಿವೇಂದ್ರರು ಆ ಊರೊಳಗಿದ್ದ ಆವಿಕೇಶ್ವರನ ದೇವಾಲಯದಲ್ಲಿ ಇಳಿದಿರುವಾಗ ಅವರನ್ನು ನೋಡುವದಕ್ಕಾಗಿ ಬಹು ಜನರು ನೆರೆದರು. ಆಗ ಸದಾಶಿವೇಂದ್ರರು ಯಾವ ಮಾತನ್ನೂ ಆಡದೆ ತಂಬಾಕವನ್ನು ಸೇದುತ್ತ ಕುಳಿತಿರಲು, ನೆರೆದವರಲ್ಲೊಬ್ಬನು—ಇವರೆಲ್ಲರು ಒಣಸಾಧುಗಳೇ ಸರಿ ನಿಜವಾದ ಸಾಧುವೆಂದು ಒಬ್ಬ ಗಂಜೀಗಟ್ಟಿಯ ಚರಂತಪ್ಪನಿಗೆ ಅನ್ನಬಹುದು. ಮೊನ್ನೆ ನಾನು ಎತ್ತು ತರಲಿಕ್ಕೆ ಹೋದಾಗ ಶಿಶುವಿನಹಾಳದ ಸರೀಫಸಾಹೇಬರಿಗೂ, ಚರಂತಪ್ಪನವರಿಗೂ ಭೆಟ್ಟಿಯಾಗಿತ್ತು. ಆಗ ಸರೀಫನು ಚರಂತನ ಪರೀಕ್ಷೆ ಮಾಡಬೇಕೆಂದು, ನೆರೆತುಂಬಿನ ಗಡಿಗೆಯನ್ನು ಆತನ ಮುಂದೆ ಇಡಲು, ಅದನ್ನು ಚರಂತಪ್ಪನು ಮೂಸಿನೋಡಿದ ಕೂಡಲೆ ಗಡಿಗೆಯು ಬರಿದಾಗಿ ತೋರಿತು ಆಗ ಚರಂತಪ್ಪನು ಗಡಿಗೆಯನ್ನು ಎತ್ತಿ ಸರೀಫಸಾಹೇಬರು ನಿಂತ ಸ್ಥಳಕ್ಕೆ ಅಪ್ಪಳಿಸಲು, ಅದು ಪುಟಿದು ಸರೀಫಸಾಹೇಬರ ತಲೆಯ ಮೇಲೆ ಕುಳಿತುಕೊಂಡಿತು. ಅದನ್ನು ನೋಡಿದಾಗ ಅದರಲ್ಲಿ ಈಚಲು ತುಂಬಿತ್ತು ಆಗ ಸರೀಪಸಾಹೇಬರು ಅದನ್ನು ಕುಡಿದು ಚರಂತಪ್ಪನಿಗೆ ಶರಣುಹೊಡೆದು ಸಾಷ್ಟಾಂಗಹಾಕಿ ಹೋದರು, ಎಂದು ಹೇಳಿದನು. ಅದನ್ನು ಕೇಳಿದ ಕೂಡಲೆ ಸದಾಶಿವೇಂದ್ರರಿಗೆ ಸಂಶಯವು ಉತ್ಪನ್ನವಾಗಿ, ಪುನಃ ಆ ಸಂಗತಿಯನ್ನು ಅವನ ಬಾಯಿಂದ ಹೇಳಿಸಿಕೊಂಡು, ಸಮಾಧಾನವಾಗದೆ ಚರಂತಪ್ಪನ ಸಂಬಂಧದಿಂದ ಹಲವು ಪ್ರಶ್ನೆಗಳನ್ನು ಕೇಳಹತ್ತಿದರು. ಕೇಳಿ-ಕೇಳಿದಹಾಗೆಲ್ಲ ಉರ್ವಕೊಂಡಿಯಲ್ಲಿ ಅಗಲಿ ಮಾಯವಾದವನ ಲಕ್ಷಣಗಳೇ ಎದುರಿಗೆ ಕಟ್ಟಿದಂತಾದವು. ಮನಸ್ಸಿಗೆ ಸಮಾಧಾನವಾಗಲೊಲ್ಲದು. ಅವನೇ ಹೌದೆಂದು ನಿಶ್ಚಯಮಾಡಹೋದರೆ ಅಲ್ಲವೆಂಬ ಸಂಶಯವು ಬಾಧಿಸುತ್ತಿತ್ತು. ಯಾವದನ್ನೂ ನಿಶ್ಚಯಿಸಲಾರದೆ ಸದಾಶಿವೇಂದ್ರರು ಹಾಗೂ ಹೀಗೂ ಆ ರಾತ್ರಿಯನ್ನು ಕಳೆದು ಮರುದಿನ ನಿತ್ಯಕರ್ಮಗಳನ್ನು ತೀರಿಸಿಕೊಂಡು ಮನಸ್ಸು ತಳಮಳಿಸುತ್ತಿರಲು, ಕಜಾಗಿ ತಾಲೂಕಿನೊಳಗಿನ ದೇವಗಿರಿಯೆಂಬ ಗ್ರಾಮಕ್ಕೆ ಬಂದರು.

ದೇವಗಿರಿಯ ಜನರು ಸದಾಶಿವೇಂದ್ರರನ್ನು ನೋಡಿ, ಯಾವನೋ ಸಂನ್ಯಾಸಿಯು, ಗುರುತಿಲ್ಲದವರ ಗೊಡವೆ ನಮಗೆ ಯಾಕೆಂದು ಸುಮ್ಮನೆ ಉಪಚಾರಕ್ಕಾಗಿ ನಮಸ್ಕಾರ ಮಾಡಿ ಹೊರಟುಹೋಗಹತ್ತಿದರು. ಡೊಳ್ಳು ಹೊಡೆಯದೆ ಜನರು ನೆರೆಯುವದಿಲ್ಲೆಂಬ ಮಾತು ಗೊತ್ತಿದ್ದದ್ದೇ. ಸದಾಶಿವೇಂದ್ರರು ಒಂದು ಸ್ಥಳದಲ್ಲಿ ವಿಶ್ರಾಂತಿಗಾಗಿ ಕುಳಿತುಕೊಂಡು ಗಾಂಜಿಯನ್ನು ತೆಗೆದು ಮದ್ದಹತ್ತಿ

ದರು ಬಳಿಕ ಹನ್ನೆರಡುಬೆರಳು ಉದ್ದವೂ, ಮೂರೂವರೆ ಬೆರಳು ವ್ಯಾಸವೂ ಉಳ್ಳ ತಮ್ಮ ಚಿಲಿಮೆಯನ್ನು ತೆಗೆದು, ಸಿದ್ಧವಾದ ಗಾಂಜಿಯನ್ನು ಅದರಲ್ಲಿ ಹಾಕಿದರು, ಆದರೆ ಬೆಂಕಿಯಿದ್ದಿಲ್ಲ. ಗಾಂಜಿಯ ಚಟವುಳ್ಳವನೊಬ್ಬನು ಆಶೆಬುರಕತನದಿಂದ ಅಲ್ಲಿಯೇ ಸಮೀಪದಲ್ಲಿ ಕುಳಿತುಕೊಂಡಿದ್ದನು ಆಗ ಸದಾಶಿವೇಂದ್ರರು ಆತನನ್ನು ಕುರಿತು—ಎಲೋ, ನಮ್ಮಯ್ಯನೇ, ಬೆಂಕಿಯನ್ನು ತರುವೆಯಾ? ಎಂದು ಕೇಳಿದರು ಅಷ್ಟೇ ಹಾದಿಯನ್ನು ನೋಡುತ್ತ ಕುಳಿತಿದ್ದ ಆ ಮನುಷ್ಯನು ದೀಪದ ಪೆಟ್ಟಿಗೆಯನ್ನು ಕೊಡಲು, ಸದಾಶಿವೇಂದ್ರರು ಕಡ್ಡಿಯನ್ನು ಕೊರೆದು—"ಇದನ್ನು ಚಿಲಿಮೆಗೆ ಹಿಡಿ"ಯೆಂದು ಹೇಳಿ, ಆ ಮನುಷ್ಯನ ಕೈಯಲ್ಲಿ ಕೊಟ್ಟರು. ಆ ಮನುಷ್ಯನು ಕಡ್ಡಿಯನ್ನು ಚಿಲಿಮೆಗೆ ಹಿಡಿಯುತ್ತಲೆ ಸದಾಶಿವನು ಭರದಿಂದ ಸೇದಲು ಗಾಂಜಿಯೆಲ್ಲ ಸುಟ್ಟು ಬೂದಿಯಾಗಿತ್ತು. ಬೆಂಕಿಯೂ ಆರಿ ಬೂದಿಯೂ ಕೆಳಗೆ ಬಿತ್ತು ಆದರೆ ಬಾಯಿಂದ ಸ್ವಲ್ಪಾದರೂ ಹೊಗೆ ಹೊರಡಲಿಲ್ಲ. ಅರ್ಧತೊಲೆ ಗಾಂಜಿಯನ್ನು ಸೇದಿ ಬೂದಿಮಾಡಿದರೂ ಸ್ವಲ್ಪ ಹೊಗೆಯೂ ಹೊರಗೆ ಬಾರದ್ದನ್ನು ನೋಡಿ ಆ ಮನುಷ್ಯನು ಅಂಜಿ ಯಾವ ಮಾತನ್ನೂ ಆಡದೆ ಅಲ್ಲಿಂದ ಎದ್ದುಹೋಗಿ ಊರೊಳಗೆ ಆ ಸುದ್ದಿಯನ್ನು ಹಬ್ಬಿಸಿದನು. ಆಗ ಜನರು ಆಶ್ಚರ್ಯಪಟ್ಟು ಸುದ್ದಿಹೇಳುವ ಮನುಷ್ಯನ ಮಾತಿನ ವಿಷಯವಾಗಿ ಅವಿಶ್ವಾಸಪಡುತ್ತ ಸದಾಶಿವೇಂದ್ರರ ಬಳಿಗೆ ಬಂದು ಅವರ ಯೋಗಕ್ಷೇಮವನ್ನು ವಿಚಾರಿಸಹತ್ತಿದರು. ಚಮತ್ಕಾರಕ್ಕೆ ಮರುಳಾಗಿ ಬಾಯಿ ತೆರೆದು ಸತ್ಪುರುಷರ ಸುತ್ತು ನೆರೆದು ಏನಾದರೂ ಬೇಡಿಕೊಳ್ಳುವ ಮೂರ್ಖರೇ ಬಹು ಜನರಿರುವರಲ್ಲದೆ, ಸತ್ಪುರುಷರ ನಿಜವಾದ ಯೋಗ್ಯತೆಯನ್ನರಿತು ಅವರಿಗೆ ಶರಣುಹೋಗುವವರು ತೀರ ಕಡಿಮೆ ಇಂಥ ಮೂರ್ಖಜನರ ಯೋಗಕ್ಷೇಮಕ್ಕೆ ಗುಟ್ಟುಗೊಡದ ಸದಾಶಿವೇಂದ್ರರು—ಅಯ್ಯಗಳಿರಾ, ನನ್ನ ಊರು-ಕೇರಿಗಳನ್ನು ತಕ್ಕೊಂಡು ಏನು ಮಾಡುವಿರಿ? ನನ್ನ ಗುರುತು ಇದೇ ನೋಡಿರಿ, ಎಂದು ಚಿಲಿಮೆಯನ್ನು ಮುಂದಕ್ಕೆ ಸರಿಸಲು, ಅದೊಂದು ತರದ ಭಯಂಕರವಾದ ವೃಶ್ಚಿಕದಂತೆ ತೋರಿತು. ಆಗ ಜನರು ಭಯಪಟ್ಟು ಕೈಜೋಡಿಸಿ ನಿಂತುಕೊಂಡಿರಲು—ಏನಿರಯ್ಯಾ ನನಗೆ ಹಸಿವೆಯಾಗಿದೆ ಏನಾದರೂ ತಂದುಕೊಡುವಿರಾ, ಎಂದು ಕೇಳಿದರು. ಕೂಡಲೆ ಜನರು ಮನೆಗೆಹೋಗಿ ಊಟದ ಪದಾರ್ಥಗಳನ್ನು ತಂದರು. ಬಳಿಕ ಎಲ್ಲರೂ ಅಲ್ಲಿ ಉಂಡು ಆನಂದದಿಂದ ಕುಳಿತುಕೊಂಡರು.

ಹೀಗೆ ಆನಂದದಿಂದ ಕುಳಿತಾಗ ಸದಾಶಿವೇಂದ್ರರು—ಎಲ್ರೈ, ಇತ್ತ ನೋಡಿರಿ, ಮುಂಚಾನೆ ಸೇದಿದ ತಂಬಾಕದ ಹೊಗೆಯನ್ನು ಈಗ ಬಿಡುತ್ತೇನೆ, ಎಂದು ಹೇಳಿ ಹೊಗೆಯನ್ನು ಬಿಡಹತ್ತಿದರು. ಗುಡಿಯೆಲ್ಲ ಹೊಗೆಯಿಂದ ತುಂಬಿದ್ದಲ್ಲದೆ, ಹೊರಗೂ ಹೊಗೆ ಮುಸುಕಿತು ಇದನ್ನು ನೋಡಿ ಜನರು ವಿಶ್ವಾಸಪಡಹತ್ತಿದರು ಸದಾಶಿವೇಂದ್ರರ ಅಪ್ಪಣೆಯಂತೆ ನಡೆಯುವವರ ಸಂಖ್ಯೆಯು ದಿನದಿನಕ್ಕೆ ಹೆಚ್ಚಾಗಹತ್ತಿತು ಎಷ್ಟೋ ಜನರು ಸದಾಶಿವೇಂದ್ರರನ್ನು ಈಶ್ವರಾಂಶರೆಂದು ತಿಳಿಯಹತ್ತಿದರು ಆದರೆ ಕೆಲವು ನೀಚರು ಅವರನ್ನು ಗಾಂಜೆಬುಕ್ಕನೆಂತಲೂ, ಕುಲಹೀನ ವೇಷಧಾರಿಯೆಂತಲೂ, ಕುಡುಕನೆಂತಲೂ ಹಳಿಯಲಿಕ್ಕ ಹಿಂದೆಮುಂದೆ ನೋಡಲಿಲ್ಲ. ದುರ್ಜನರು ಯಾರಿಗೆ ಮೆಚ್ಚುವರು? ಈ ನಿಂದಾಸ್ತುತಿಗಳೆರಡಕ್ಕೂ ಸದಾಶಿವೇಂದ್ರರು ಮಹತ್ವಕೊಡಲಿಲ್ಲ ಹೀಗೆ ಕೆಲವು ದಿನಗಳಾಗಲು, ಅವರ ಪ್ರಶಂಸೆಯು ನಾಲ್ಕೂ ಕಡೆಗೆ ಹಬ್ಬಿತು ಜನರ ಸಂದಣಿಯು ವಿಶೇಷವಾಗಹತ್ತಿತು ಹೊರಗಿನ ಉತ್ಸವಗಳು ಎಷ್ಟು ನಡೆದರೂ ಗುರುದರ್ಶನವಾಗದ್ದರಿಂದ ಸದಾಶಿವೇಂದ್ರರಿಗೆ ಅಂತರಂಗದಲ್ಲಿ ಸಮಾಧಾನವಿದ್ದಿಲ್ಲ ಹೀಗಿರಲು, ಒಂದಾನೊಂದು ದಿವಸ ಸದಾಶಿವೇಂದ್ರರು ಮಧ್ಯರಾತ್ರಿಯಲ್ಲಿ, ಏನೋ ವಿಚಾರಮಾಡಿ ಎದ್ದು ದಂಡಕಮಂಡಲುಗಳನ್ನು ತಕ್ಕೊಂಡು ಸುತ್ತು-ಮುತ್ತು ಮಲಗಿದವರನ್ನು ಎಬ್ಬಿಸಿ—ಎಲೆ-ಎಲೇ, ಏಳಿರಿ ನಾಳೆ ಮಧ್ಯಾಹ್ನಕ್ಕೆ ಹಂಪೆಯ ವಿರೂಪಾಕ್ಷನ ರಥೋತ್ಸವವಾಗುತ್ತದೆ ಬೇಗನೆ ಹೋಗೋಣ ಏಳಿರಿ, ಎಂದು ಎಲ್ಲರನ್ನು ಕರೆಯಲು, ಅವರು—ಸ್ವಾಮಿ, ಹಂಪೆಯೆಲ್ಲಿ, ನಾವೆಲ್ಲಿ? ಐವತ್ತು ಅರವತ್ತು ಹರದಾರಿ ದೂರವಿರುವಲ್ಲಿಗೆ ನಡೆಯುತ್ತ ಹೋಗಿ ರಥೋತ್ಸವದ ಹೊತ್ತಿಗೆ ಮುಟ್ಟುವದು ಹ್ಯಾಗೆ? ಈಗ ನಾವು ರೈಲಗಾಡಿಯಿಂದ ಹೋದರೂ ಹೊತ್ತಿಗೆ ಮುಟ್ಟುವಹಾಗಿಲ್ಲ. ಅನ್ನಲು—ಮಕ್ಕಳಿರಾ! ಕಣ್ಣಿಗೆ ದೂರವಾದರೂ ಕಾಲಿಗೂ, ಮನಸ್ಸಿಗೂ ದೂರವಲ್ಲವು. ನಾನು ಹೋಗಿಬರುತ್ತೇನೆ ನೋಡಿರಿ, ಎಂದು ಹೊರಟು ಹೋದರು. ಹೋದವರು ತೇರು ಎಳೆಯುವದರೊಳಗಾಗಿ ಹಂಪಿಗೆ ಹೋಗಿ, ಅಲ್ಲಿಗೆ ಮೊದಲೇ ಹೋಗಿದ್ದ ದೇವಗಿರಿಯ ಜನರಿಗೆ ಭೆಟ್ಟಿಯಾದರು ತೇರು ಎಳೆದ ಬಳಿಕ ಸದಾಶಿವೇಂದ್ರರು ದೇವಗಿರಿಯ ಜನರಿಗೆ—ಎಲೇ, ಊರಿಗೆ ಬರುತ್ತೀರೇನಲೆ, ನಾನು ಹೋಗುತ್ತೇನೆ ಬೇಕಾದರೆ ಬರ್ರಿ ಎನ್ನಲು, ಅವರು—ಸ್ವಾಮಿ, ನಾಳೆ ಬೆಳಗಿನಲ್ಲಿ ಹೋಗೋಣ, ಇಷ್ಟು ಅವಸರವೇಕೆ? ಅನ್ನಲು, ಸದಾಶಿವೇಂದ್ರರು—

ಮಕ್ಕಳಿರಾ, ಛಬ್ಬಿಯೆಂಬ ಗ್ರಾಮದಿಂದ ನನ್ನನ್ನು ಕರೆಯಲಿಕ್ಕೆ ಒಬ್ಬನು ದೇವ ಗಿರಿಯಲ್ಲಿ ಬಂದು ಕುಳಿತಿದ್ದಾನೆ ನಾನು ಹೋಗುವವರೆಗೆ ಆತನು ಊಟವಮಾ ಡುವಹಾಗಿಲ್ಲ, ಎಂದು ಹೇಳಿದವರೇ ತಮ್ಮ ಸಾಮಾನುಗಳನ್ನು ಬಗಲಿಗೆ ಹಾಕಿ ಕೊಂಡು ಹೊರಟು ಮಧ್ಯಾಹ್ನಕ್ಕೆ ದೇವಗಿರಿಗೆ ಬಂದುಬಿಟ್ಟರು. ಛಬ್ಬಿಯಿಂದ ಕರೆಯಬಂದ ಮನುಷ್ಯನ ಅಭೀಷ್ಟವನ್ನು ಪೂರ್ಣಮಾಡಿ, ಇನ್ನು ಕೆಲವು ದಿನಗಳ ಮೇಲೆ ನಿಮ್ಮ ಊರಿಗೆ ಬರುವೆನೆಂದು ಹೇಳಿ ಆತನನ್ನು ಕಳಿಸಿಕೊಟ್ಟರು ಹಂಸೆಗೆ ಹೋದವರು ಮುಂದೆ ಎರಡು ದಿನಗಳಮೇಲೆ ಬಂದು ರಥೋತ್ಸವಕ್ಕೆ ಸ್ವಾಮಿ ಗಳು ದಯಮಾಡಿಸಿದ್ದನ್ನು ಹೇಳಲು, ಜನರು ಆಶ್ಚರ್ಯಪಟ್ಟು, ಈತನು ಮಹಿ ಮಾಪುರುಷನು ಹೌದೆಂದು ತಿಳಿದು ದೃಢಭಕ್ತಿಯುಳ್ಳವರಾದರು ಅಲೌಕಿಕ ಕೃತಿಗಳೇ ಸತ್ಪುರುಷರ ಡೊಳ್ಳು!

---

## ೫ನೆಯ ಪ್ರಕರಣ — ಸದ್ಗುರುವೂ, ಸಚ್ಛಿಷ್ಯನೂ.

———[ ೦ ]———

ಇತ್ತ ಚರಂತಪ್ಪನು ಉರ್ವಕೊಂಡಿಯಲ್ಲಿ ಗುರುವಿನ ಉತ್ತರಕ್ರಿಯೆಗ ಳನ್ನು ತೀರಿಸಿ ಮಾಯವಾಗಿ ಬಂದವನು ಪಯಣದ ಮೇಲೆ ಪಯಣವನ್ನು ಬೆಳಿಸಿ ತನ್ನ ವಾಸಸ್ಥಳವಾದ ಗಂಜೀಗಟ್ಟಿಗೆ ಬಂದನು ನೋಡುವವರಿಗೆ ಆತನ ಸ್ಥಿತಿಯು ಮತ್ತಿಷ್ಟು ರೂಪಾಂತರವಾಗಿ ತೋರುತ್ತಿತ್ತು. ಆತನ ಮಹಾ ಮಹಿಮೆಗಳು ಊರವರಿಗೆ ಆಶ್ಚರ್ಯಕರವಾಗಿ ತೋರಹತ್ತಿದವು. ಹುಡುಗರಂತು ಈತನು ಬಂದ ಕೂಡಲೆ "ಎಲೇ ಹುಚ್ಚಚರಂತಪ್ಪನು ಮತ್ತೆ ಬಂದಾನಲಾ, ಬರ್ರಿ ಹೋಗೋಣ" ಎಂದು ಓಡಿಹೋಗಿ ಆತನ ಸುತ್ತುಮುತ್ತು ನೆರೆದು "ಏ ಚರಂ- ತಪ್ಪಾ, ಇಷ್ಟು ದಿವಸ ಎಲ್ಲಿ ಹೋಗಿದ್ದಿ?" ಎಂದು ಪರಿ ಪರಿಯಿಂದ ಪೀಡಿಸಿ ಕೇಳಹತ್ತಿದರು. ಅದಕ್ಕೆ ಚರಂತಪ್ಪನು ಮಾತಾಡದೆ ಸುಮ್ಮನೆ ಇರುತ್ತಿದ್ದನು. ಯಾರಾದರೂ ಬಂದು ನಮಸ್ಕರಿಸಿದರೂ ಸುಮ್ಮನೆ ಇರುತ್ತಿದ್ದನು. ತನಗೆ ಆನಂದಬಂದಾಗ ಸೇದಲಿಕ್ಕೆ ಚುಟ್ಟವನ್ನು ಕೇಳುವನು, ಚುಟ್ಟವನ್ನು ಕೊಡಹೋ ದರೆ ನೀನು ಸೇದಿಕೊಡು ಅನ್ನುವನು. ಅವರು ಹಾಗೆ ಮಾಡದೆ ಸುಮ್ಮನೆ ನಿಂತರೆ

ಹೊಡೆದು ಓಡಿ ಹೋಗುವನು. ಒಮ್ಮೊಮ್ಮೆ ಈ ಮಹಾಮಹಿಮನು ಆಟದಲ್ಲಿ ತೊಡಗಿರುವಾಗ ನಡುವೇ ಫಕ್ಕನೆ ನಿಂತು—ಎಲೆ ಸದಾಶಿವಾ, ನಿನ್ನ ನಂಬಿಗೆಯು ಎಷ್ಟು ಬಲವತ್ತರವಾದದ್ದು? ಅದು ನನ್ನನ್ನೇ ಒಯಸಹಚ್ಚಿರುವದಲ್ಲ! ಒಳ್ಳೇದು. ಈಗಲೇ ನಿನಗೆ ಸಂತೋಷವನ್ನುಂಟುಮಾಡುತ್ತೇನೆ ಹಿಡಿ, ಎಂದು ಕೈಯಲ್ಲಿದ್ದ ಪುಸ್ತಕವನ್ನಾಗಲಿ, ರೊಟ್ಟಿಯ ತುಣುಕನ್ನಾಗಲಿ ಒಗೆದುಬಿಡಲು, ಅವು ಕಾಣ ದಂತೆ ಯಾವಕಡೆಗೋ ಹೋಗಿಬಿಡುತ್ತಿದ್ದವು. ಒಮ್ಮೊಮ್ಮೆ ತನ್ನಷ್ಟಕ್ಕೆ ತಾನೇ— ಯಾಕೆ, ಇನ್ನೂ ನಾನು ನಿನಗೆ ಸಿಗಲೊಲ್ಲೆನೋ? ಎಷ್ಟು ಒಳಲುತ್ತಿಯೋ ಸದಾ ಶಿವಾ! ನನ್ನದು-ನಿನ್ನದೆಂಬ ವಿಷಯಾಂಧಃಕಾರವು ಪೂರ್ಣ ಹರಿಯುವ ವರೆಗೆ ಆ ಬಂಧನವು ನಿನಗೆ ಬಿಡದು, ಸ್ವಯಂಪ್ರಕಾಶವು ತೋರದು, ಬಳಲಿಕೆಯು ತಪ್ಪ- ದು. ನನ್ನದು-ತನ್ನದು ಎಂಬ ಅಭಿಮಾನವನ್ನು ಬೇಗನೆ ಕಳೆದು ಹುಡುಕು, ಅಂದರೆ ಸಿಗುತ್ತೇನೆ, ಎನ್ನುತ್ತ ಆಕಳಿಸಿ ಚಪ್ಪಾಳೆಯನ್ನಿಕ್ಕುವನು ಈತನು ಹೀಗೆ ಮಾಡುತ್ತಿರುವಾಗ ಸಮೀಪದಲ್ಲಿದ್ದವರು—ಸ್ವಾಮಿ, ತಾವು ಹೀಗೆ ಯಾರಿಗೆ ಅನ್ನುತ್ತೀರೆಂದು ಕೇಳಲು, ಎಲೇ, ಯಾರಿಗೂ ಇಲ್ಲ. ಆ ಸದಾಶಿವನು ನನ್ನ ಸಲುವಾಗಿ ಒಲು ಕಷ್ಟಪಡುತ್ತಾನೆ ಅದಕ್ಕಾಗಿ ಹಾಗೆ ಅನ್ನುತ್ತೇನೆಂದು ಹೇಳು ವನು. ಆತನ ಮಾತಿನ ನಿಜವಾದ ಅರ್ಥವು ಜನರಿಗೆ ತಿಳಿಯದ್ದರಿಂದ ಅವರು ಮನಸ್ಸಿನಲ್ಲಿ—ಆ ಜಗತ್ಕರ್ತನಾದ ಸದಾಶಿವನೆಲ್ಲಿ? ಈ ಹುಚ್ಚ ಚರಂತಪ್ಪನೆಲ್ಲಿ? ಲೋಕದಲ್ಲಿ ಇವರಿಗೆ ಸಾಧುಗಳು ಅಂದಹಾಗೆ ಮತ್ತಿಷ್ಟು ಸೋಗು ತೋರಿಸು ತ್ತಾರೆ, ಎಂದು ತಮ್ಮಲ್ಲಿ ಅಂದುಕೊಂಡು ಸುಮ್ಮನಿರುವರು

ಈ ಪ್ರಕಾರ ಲೌಕಿಕದವರ ಹಾಸ್ಯಕ್ಕಾಸ್ಪದನಾಗಿಯೂ, ಜ್ಞಾನಿಗಳಿಗೆ ಲೀಲಾಸ್ವರೂಪಿಯಾಗಿಯೂ, ಪಾಮರರಿಗೆ ಹುಚ್ಚನಾಗಿಯೂ, ಬ್ರಹ್ಮಾನಂದಪರ ವಶನಾಗಿದ್ದ ಈ ಮಹಾನುಭಾವನು ತನ್ನ ನಿತ್ಯಕರ್ಮವಾದ ಅಂತರ್ಯಶಿವಪೂಜೆ ಯನ್ನು ಎಂದಿನಂತೆ ಮನಸ್ಸಿನಲ್ಲಿ ಮಾಡಿ ಒಂದು ಮಾವಿನಮರದ ಬುಡದಲ್ಲಿ ಕುಳಿ ತುಕೊಂಡಿದ್ದನು. ಅಂದು ಶಕ ೧೮೦೦ನೇ ಮಾಘವದ್ಯ ಪ್ರತಿಪದೆಯು ಸಮಾ ಪೂರ್ತವಾಗಿತ್ತು ಅಂದು ಕೌತುಕದ ಸಂಗತಿಯು ಒದಗಿತು. ಚರಂತಪ್ಪನ ಹತ್ತರ ಒಬ್ಬ ಸದ್ಭಕ್ತನು ನಿಂತಿರುತ್ತಾನೆ, ಕೆಲವರು ತಂಬಾಕಸೇದುವದಕ್ಕಾಗಿ ಬಂದು ಕುಳಿತುಕೊಂಡಿದ್ದಾರೆ ಆ ಕಾಲದಲ್ಲಿ ಚರಮೂರ್ತಿವರನು ತನ್ನ ಕೈಯ ಲ್ಲಿದ್ದ ಪುಸ್ತಕವನ್ನು ಕೆಳಗಿಟ್ಟು, ತಲೆಯ ಮೇಲಿದ್ದ ಕಾವಿಯ ಹರಕ ಚಿಂದೆಯನ್ನು ಕೆಳಗೆ ಚಲ್ಲಿ ಸುಮ್ಮನೆ ಕುಳಿತುಕೊಂಡನು. ನೆರೆದಿದ್ದ ಜನರಾದರೂ ಈತನನ್ನು

ನೋಡಿ ಸುಮ್ಮನೆ ಕುಳಿತುಬಿಟ್ಟರು. ಒಬ್ಬರೂ ಪಿಟ್ಟೆಂದು ಮಾತಾಡಲಿಲ್ಲ. ಈ ಸ್ಥಿತಿಯಲ್ಲಿ ಎಂಟುತಾಸು ರಾತ್ರಿಯಾಯಿತು ಆಗ ಚರಮೂರ್ತಿವರನು—"ಹಾ! ಸದಾಶಿವಾ, ಉರಗರಾಜನು ಬಲು ಬಲಿಷ್ಠನಿರುವನು ನಿಜ. ನೀನು ಗುರುಪುತ್ರ ನಹುದಲಾ" ಎಂದು ಒನ್ಮೆಲೆ ಗಟ್ಟಿಸಿ ನುಡಿದು "ಜಯನಮಃಪಾರ್ವತೀಪತೇ ಹರಹರ ಮಹಾದೇವ" ಎಂದು ಜಯಘೋಷಮಾಡಲು, ಎಲ್ಲರೂ ಅದರಂತೆ ಜಯಘೋಷವನ್ನು ಮಾಡಿದರು ಬಳಿಕ ಚರಂತಪ್ಪನು ಎಲ್ಲರೊಡನೆ ವಿನೋದ ದಿಂದ ಮಾತಾಡುತ್ತ ಕುಳಿತಿರಲು ಒಬ್ಬ ಭಕ್ತಶ್ರೇಷ್ಠನು ಎದ್ದುನಿಂತು—ಮಹಾ ಸ್ವಾಮಿ, ತಾವು ಇಷ್ಟುಹೊತ್ತಿನ ವರೆಗೆ ಮೌನವ್ರತವನ್ನು ತಾಳಿ, ಕಡೆಗೆ ಜಯ ಘೋಷಮಾಡಿದ ಕಾರಣವೇನು? ಎಂದು ಕೇಳಲು, ಚರಂತಪ್ಪನು—ಈಗ ನೀನು ಅದನ್ನು ಕೇಳತಕ್ಕದ್ದಲ್ಲ ಇನ್ನು ಕೆಲವು ದಿನಗಳಮೇಲೆ ಈ ಸ್ಥಾನಕ್ಕೆ ಈಶಾನ್ಯದಿಕ್ಕಿ ನಿಂದ ಬರುವವನಿಂದ ಅದು ನಿಮಗೆ ತಿಳಿಯುವದು. ಈಗ ಈ ಸಂಗತಿಯನ್ನು ಗುಪ್ತವಾಗಿಡಿರಿ, ಎಂದು ಹೇಳಿದನು ಹೀಗೆ ಮಾತಾಡುತ್ತ ಕುಳಿತಿರುವಾಗ ಅರು ಣೋದಯವಾಯಿತು ನೆರೆದ ಜನರು ಹಾಗೇ ಎದ್ದು ನಡೆದ ವಿಷಯವನ್ನು ಕುರಿತು ಬಗೆ ಬಗೆಯಾಗಿ ಕಲ್ಪಿಸುತ್ತ ಮನೆಗೆ ಹೋದರು. ಚರಂತಪ್ಪನಾದರೂ ಅಲ್ಲಿಂದ ಎದ್ದು ಸಮೀಪದಲ್ಲಿರುವ ತೋಟಕ್ಕೆ ಹೋಗಿ ಒಗೆಬಗೆಯ ಹೂಗಳನ್ನು ಕೊಯ್ದುಕೊಂಡು ಊರಲ್ಲಿ ಬಂದು ತನಗೆ ಭೆಟ್ಟಿಯಾದವರಿಗೆ—ಎಲೇ, ಇನ್ನು ಸದಾಶಿವನು ಬರುತ್ತಾನೆ ಆತನು ಬಂದಬಳಿಕ ನೀನು ಭಕ್ತನಾಗುತ್ತೀಯಾ? ಎಂದು ಕೇಳುತ್ತ ಕರತಳಭಿಕ್ಷಕ್ಕೆ ಹೋದನು. ಭಿಕ್ಷೆ ನೀಡುವಾಗ ಕೆಲವರು ಈತನನ್ನು ಎಲ್ಲಿ ಮುಟ್ಟೇವೋ, ಎಂಬ ಸಂಶಯದಿಂದ ರೊಟ್ಟಿಯನ್ನು ದೂರಿಂದ ಹಾಕಲು, ಚರಂತಪ್ಪನು ಒಡ್ಡಿದ ಬೊಗಸೆಯನ್ನು ಅಗಲಿಸಿ ರೊಟ್ಟಿಯನ್ನು ಕೆಳಗೆ ಬಿಡುವನು. ಅದು ನೆಲದಮೇಲಾಗಲಿ ಮುಸರಿಯ ಬಾನೆಯಲ್ಲಾಗಲಿ ಬೀಳು ವದು. ಆಗ ರೊಟ್ಟಿಯ ನೀಡಿದವರು—"ಚರಂತಪ್ಪಾ, ಹೀಗೆ ಯಾಕೆ ಮಾ- ಡುತ್ತೀ?" ಎಂದು ಕೇಳಲು—"ನೀನು ರೊಟ್ಟಿಯ ನೀಡಿದ್ದರೆ ನಾನು ನೀಡಿಸಿ ಕೊಳ್ಳುತ್ತಿದ್ದೆನು, ಬಗನ ಎಲ್ಲಿ ಸೆಗ್ಗಾಗಿಮಾಡೀತೋ ಎಂಬ ಸಂಶಯದಿಂದ ರೊಟ್ಟಿಯನ್ನು ಚಲ್ಲಿಕೊಟ್ಟಬಳಿಕ ನಿನ್ನ ಮ್ಯಲಿಗೆಯ ರೊಟ್ಟಿಯನ್ನು ನಾನಾದರೂ ಹ್ಯಾಗೆ ನೀಡಿಸಿಕೊಳ್ಳಲಿ?" ಎಂದು ಉತ್ತರ ಹೇಳುವನು. ಈತನ ಈ ಸ್ವಭಾವ ವನ್ನು ನೋಡಿ ಕೆಲವರು ನೀಡದೆ ಬೇಕೆಂತಲೆ ಮನೆಯೊಳಗೆ ಸುಮ್ಮನೆ ಇರುತ್ತಿ ದ್ದರು. ಆಗ ಚರಂತಪ್ಪನು—"ಎಲೇ, ಹೀಗೆ ಯಾಕೆ ಸುಮ್ಮನೆ ಮೂಕರಾಗು

ಏರಿ? ಅದೋ, ನಿಮ್ಮ ಮನೆಯೊಳಗೆ ದೇವರ ಕೋಣೆಯಲ್ಲಿರುವ ಅಡಕಲಿನಲ್ಲಿ ನಡುವಿನ ಗಡಿಗೆಯೊಳಗೆ ಬೆಲ್ಲವದೆ, ಅದನ್ನು ಸ್ವಲ್ಪ ಕೊಡಿರಿ ತಿನ್ನುತ್ತೇನೆ," ಎಂತಲೂ, "ಆಗೋ, ನಿನ್ನ ಸೊಸೆಯು ಆ ಮಾಡದಲ್ಲಿ ರೊಟ್ಟಿಯನ್ನು ಮುಚ್ಚಿ ಇಟ್ಟಿರುತ್ತಾಳೆ, ಸ್ವಲ್ಪ ಮೊಸರು ಹಚ್ಚಿಕೊಡಿರಿ. ತಿನ್ನುತ್ತೇನೆ," ಎಂತಲೂ ಅನೇಕ ವಿಧವಾಗಿ ಹೇಳುವನು. ಹೀಗೆ ಓಣಿಯಲ್ಲಿ ನಿಂತು ಇದ್ದಕ್ಕಿದ್ದಹಾಗೆ ಹೇಳುವದನ್ನು ನೋಡಿ ಜನರು ಭಯಪಟ್ಟು ಚರಂತಪ್ಪನು ಬಂದಕೂಡಲೆ ಇದ್ದ ದ್ದನ್ನು ನೀಡಿ ಶರಣುಮಾಡುತ್ತಿದ್ದರು. ಒಮ್ಮೆ ಒಬ್ಬ ಹೆಣ್ಣುಮಗಳು ರೊಟ್ಟಿ ಯನ್ನು ಎತ್ತಿ ದೂರದಿಂದ ಚರಂತಪ್ಪನ ಕೈಯಲ್ಲಿ ಒಗೆಯಲು, ಚರಂತಪ್ಪನು ಕೈಯನ್ನು ಬಿಟ್ಟನು ಆಗ ರೊಟ್ಟಿಯು ಮುಸರಿಯ ಬಾನಿಯಲ್ಲಿ ಬಿದ್ದಿತು. ಚರಂತಪ್ಪನು ಬಾನೆಯೊಳಗೆ ಕೈಹಾಕಿ ಆ ರೊಟ್ಟಿಯನ್ನು ತೆಗೆಯಲು, ಅದೇ ಹಂಚಿನ ಮೇಲಿಂದ ತೆಗೆದ ರೊಟ್ಟಿಯಂತೆ ಅದರೊಳಗಿಂದ ಉಗಿಯು ಹಾಯು ತ್ತಿತ್ತು. ಅದಕ್ಕೆ ಆ ಹೆಣ್ಣುಮಗಳು ಹೀಗಾಗಲಿಕ್ಕೆ ಕಾರಣವೇನೆಂದು ಚರಂ ತಪ್ಪನನ್ನು ಕೇಳಲು, ನಿನ್ನ ಮುಟ್ಟರೊಟ್ಟಿಯು ನನಗೆ ತಿನ್ನಲಿಕ್ಕೆ ಯೋಗ್ಯವಾದ ದಲ್ಲೆಂದು ತಿಳಿದು ಗಂಗವ್ವನು ಅದನ್ನು ಮತ್ತೆ ಸುಟ್ಟು ಪವಿತ್ರವಾಗಿ ಮಾಡಿ ಕೊಟ್ಟಳು, ಎಂದು ಹೇಳಿದನು. ಈ ಪ್ರಕಾರ ಒಂದಲ್ಲ-ಎರಡಲ್ಲ, ಚರಂತಪ್ಪನ ಹಲವು ಲೀಲೆಗಳು ಗಂಜೀಗಟ್ಟಿಯವರ ಅನುಭವಕ್ಕೆ ಬರುತ್ತಲಿದ್ದವು

ಚರಂತಪ್ಪನು ಜಾತ್ಯಭಿಮಾನವನ್ನು ತ್ಯಜಿಸಿದ್ದನೆಂದು ಹಿಂದೆ ಹೇಳಿದೆ ಯಷ್ಟೇ, ಆತನು ಭೇದಭಾವವೆಣಿಸದೆ ಎಲ್ಲ ಜಾತಿಯವರಲ್ಲಿ ಊಟಮಾಡುತ್ತಿದ್ದ ದರಿಂದ ಎಲ್ಲರು ತಮ್ಮವನೆಂದು ಈತನನ್ನು ಪ್ರೀತಿಸುತ್ತಿದ್ದರು. ಆ ಊರಲ್ಲಿಯ ಮಂತ್ರವಾದಿ ಸಿದ್ಧರಾಮಪ್ಪನ ಮನೆಯು ಚರಂತಪ್ಪನ ವಾಸಸ್ಥಳವಾಗಿತ್ತು. ಸಿದ್ಧರಾಮಪ್ಪನು ಸಾಧುಸತ್ಪುರುಷರ ಸೇವೆಯಲ್ಲಿಯೂ, ಅವರಿಂದ ನಾಲ್ಕು ಬೋಧವಚನಗಳನ್ನು ಕೇಳುವಲ್ಲಿಯೂ ಪ್ರೇಮವುಳ್ಳವನಾಗಿದ್ದನು ಚರಂತ ಪ್ಪನ ಸಂಚಾರಕ್ಕೆ ಗಂಜೀಗಟ್ಟಿಯೂ, ಅದರ ಸುತ್ತುಮುತ್ತಲಿನ ನಾಲ್ಕು ಊರು ಗಳೂ ಸ್ಥಾನವಾಗಿದ್ದವು ಆತನು ಬಂದಕೂಡಲೆ ಜನರು "ಕಾಲಡೋಣಿಯಲ್ಲಿ ನೀರು ಕುಡಿಯುವ ಹುಚ್ಚನು ಬಂದನೆ"ಂದು ನುಡಿದು, ಇವನು ದೂರದಲ್ಲಿರು ವಾಗಲೇ ಒಂದು ತುಣುಕು ರೊಟ್ಟಿಯನ್ನು ಹಾಕುತ್ತಿದ್ದರು. ಪಾಮರರಿಗೆ ಈ ಮಹಿಮನ ಯೋಗ್ಯತೆ ಹ್ಯಾಗೆ ತಿಳಿಯಬೇಕು? ಈತನು ಬಹು ದೇಶಪರ್ಯಟನ ಮಾಡಿ, ದೊಡ್ಡ ದೊಡ್ಡ ಪವಿತ್ರ ಸ್ಥಳಗಳನ್ನು ತಿರುಗಿ, ಮಹಾನುಭಾವರಾದ

ಸಾಧು-ಸತ್ಪುರುಷರ ದರ್ಶನ್ನಮಾಡಿ, ವೇದಾಂತದ ಮಹಾವಾಕ್ಯಗಳ ಶ್ರವಣ ಮಾಡಿದ್ದರಿಂದ ಆತನ ಕಾಯ-ಜೀವಗಳು ಪವಿತ್ರವಾಗಿದ್ದವು. ಶ್ರೀಗುರುಕೃಪೆ ಯಿಂದ ಆತನು ಪರಮ ಶಾಂತಿಯನ್ನು ಹೊಂದಿ, ಸದಾನಂದಿಯಾಗಿರುತ್ತಿದ್ದನು. ಒಮ್ಮೊಮ್ಮೆ ಆ ಮಹಾತ್ಮನ ಮುಖದಿಂದ ಪರಮಾನುಭವದ ಮಹಾವಾಕ್ಯಗಳು ಹೊರಬೀಳುತ್ತಿದ್ದವು, ಆದರೆ ಅವು ಅಶ್ರದ್ಧೆಯ ಜನರ ಮನಸ್ಸಿನಲ್ಲಿ ಸೇರುವದು ಅಪರೂಪವು ಆತನು ಈಗಿನ ದಾಂಭಿಕ ವೇದಾಂತಿಗಳಂತೆ ಬಾಯ್ಬಡಕತನವೇ ಮೊದಲಾದ ಬಯಲಾಡಂಬರದ ಗೊಡವೆಗೆ ಹೋಗದೆ, ತನ್ನ ಅಗಾಧವಾದ ಸರ್ವ ಶಕ್ತಿಗಳನ್ನು ಗೂಢವಾಗಿಟ್ಟುಕೊಂಡು ಹೊರಗೆ ಹುಚ್ಚನಂತೆ ನಟಿಸುತ್ತಿದ್ದನು. ಅಂದಬಳಿಕ ಸದಾಶಿವೇಂದ್ರರಂಥ ದೊಡ್ಡ ಯೋಗ್ಯತೆಯ ಮುಮುಕ್ಷುವಲ್ಲದೆ, ಹುಚ್ಚ ಚರಂತಪ್ಪನ ಗುರುತನ್ನು ಬೇರೆ ಯಾರು ಹಿಡಿಯಬೇಕು? ಇತ್ತ ಚರಂ ತಪ್ಪನು ತನ್ನ ನಿಜವಾದ ಶಿಷ್ಯನು ಸದಾಶಿವನೊಬ್ಬನೇ ಎಂದು ತಿಳಿದಿದ್ದು, ಆತನು ಸದಾಶಿವನ ವೃತ್ತಿಯು ಹಣ್ಣಾಗುವ ಹಾದಿಯನ್ನೇ ನೋಡುತ್ತಿದ್ದನು. ತನ್ನ ಅನುಗ್ರಹಕ್ಕೆ ಪಾತ್ರನಾದವನು ಸದಾಶಿವನೊಬ್ಬನಾದರೂ ಇರುತ್ತಾನೆಂಬ ಆನಂ ದವು ಚರಂತಪ್ಪನ ಹೊಟ್ಟೆಯಲ್ಲಿ ಹಿಡಿಸದೆ ಹೊರಬೀಳುತ್ತಿತ್ತು ಚರಂತಪ್ಪನು ಆವಾಗ್ಗೆ ಜನರ ಮುಂದೆ—ಎಲೇ, ಇನ್ನುಮೇಲೆ ಸದಾಶಿವನು ಬರುತ್ತಾನೆ; ನೀವು ಅವನ ಶಿಷ್ಯರಾಗುವಿರಾ? ಎಂದು ಆನಂದವು ಹಿಡಿಸದೆ ನುಡಿಯುತ್ತಿದ್ದನು. ಪ್ರಸಾದಭಕ್ತರೂ ವಿಷಯಲೋಲುಪರೂ, ಆದ ಅಧಮಭಕ್ತರ ಹಿಂಡು ಸತ್ಪುರು ಷರ ಸುತ್ತುಮುತ್ತು ನೆರದಿದ್ದರೂ, ಅವರಿಂದ ಸತ್ಪುರುಷರಿಗೆ ಎಷ್ಟುಮಾತ್ರವೂ ಸಮಾಧಾನವಾಗುವದಿಲ್ಲ ತಾವು ಬಹು ಕಷ್ಟಪಟ್ಟು ಸಂಪಾದಿಸಿದ ದುರ್ಲಭ ವಾದ ಪಾರಮಾರ್ಥಿಕ ಸಂಪತ್ತನ್ನು ಕಾಯ್ದುಕೊಳ್ಳುವ ಸತ್ವಶಾಲಿಯಾದ ಸಚ್ಛಿ ಷ್ಯನ ಹಾದಿಯನ್ನು ಅವರು ಆತ್ಯಾತುರದಿಂದ ನೋಡುವರು, ಅವರು ಪರಿಪರಿ ಯಾಗಿ ಆತನ ಯೋಗಕ್ಷೇಮವನ್ನು ವಿಚಾರಿಸುವರು. ವಾತ್ಸಲ್ಯದಿಂದ ಆತನಿಗೆ ಸದ್ಬೋಧವನ್ನು ಮಾಡುವರು ಸದ್ಗುರುವಿನ ವಾತ್ಸಲ್ಯದ ಈ ಎಲ್ಲ ಆದರಣೆಗ ಳಿಗೆ ನಮ್ಮ ಸದಾಶಿವೇಂದ್ರರು ಪಾತ್ರರಾಗಿದ್ದರು. ಗುರುವಿನ ದರ್ಶನವು ಹ್ಯಾಗಾದೀತೆಂದು ಅವರು ಆತುರಪಡುತ್ತಿದ್ದರು. ಶಿಷ್ಯನ ಅಭಿಮಾನವು ಎಂದು ನಷ್ಟವಾದೀತೆಂದು ಗುರುಗಳು ಹಾದಿಯು ನೋಡುತ್ತಿದ್ದರು ಇಂಥ ಗುರು-ಶಿಷ್ಯರೇ ಧನ್ಯರೆಂದು ತಿಳಿಯಬೇಕು. ಗುರುಸೇವೆಯನ್ನು ಮಾಡುತ್ತ ತಮ್ಮ ಸಂಸಾರ ವಾಸನೆಯನ್ನೂ, ದುರ್ಗುಣಗಳನ್ನೂ, ದೇಹಾಭಿಮಾನವನ್ನೂ ಕಳೆದು

ಕೊಳ್ಳಲಿಕ್ಕೆ ಆತ್ಮಸಂಯಮನದಿಂದ ಯತ್ನಮಾಡದೆ, ಸದ್ಗುರುವಿನ ಬೆಂಬಲದಿಂದ ತಮ್ಮ ಧನತೃಷ್ಣೆಯನ್ನು ಗುಪ್ತವಾಗಿ ಪೂರ್ಣಮಾಡಿಕೊಳ್ಳುತ್ತ, ದುರಾಚರಣೆಗಳನ್ನು ಎಸಗುತ್ತ, ತಾವೇ ಶ್ರೇಷ್ಠರೆಂಬ ದುರಭಿಮಾನದಿಂದ ಮೆರೆಯುವ ನರಕಭಾಜನರಾದ ಶಿಷ್ಯರು ಆತ್ಮಘಾತಕಿಗಳಲ್ಲದೆ, ಉದ್ಧಾರವಾಗತಕ್ಕವರಲ್ಲ. ಭೂತದಯೆ ಪಶ್ಚಾತ್ತಾಪಗಳಿಲ್ಲದ ಅಧಮರು ಶಿಷ್ಯಪದವಿಗೆ ಪಾತ್ರರೇ? ಅನ್ನ ಕೊಟ್ಟ ಸೆಟ್ಟಿಗೆ ಬಿರಸು ಮಾತಾಡಿದ ಮಾತ್ರದಿಂದ ಪಶ್ಚಾತ್ತಾಪಪಟ್ಟ ದಯಾಪರರಾದ ಸದಾಶಿವೇಂದ್ರರ ಸಚ್ಛಿಷ್ಯತೆಯನ್ನು ವಾಚಕರು ನೆನಪಿನಲ್ಲಿಡಬೇಕು. ಸದಾಶಿವನಿಗೆ ಛಬ್ಬಿಯೊಳಗಿನ ಒಂದು ಗುಡಿಯಲ್ಲಿ ಒದಗಿದ ಸರ್ಪಭಯದ ನಿವಾರಣೆಯ ವಿಷಯವಾಗಿ ನಮ್ಮ ಹುಚ್ಚ ಚರಂತಪ್ಪನು ಎಷ್ಟು ಜಾಗರೂಕನಾಗಿದ್ದನೆಂಬದು ಮುಂದಿನ ಪ್ರಕರಣಗಳಿಂದ ವಾಚಕರಿಗೆ ಗೊತ್ತಾದರೆ, ಸದ್ಗುರುವಿನ ಸಚ್ಛಿಷ್ಯ ವಾತ್ಸಲ್ಯದ ಹಾಗು ಆದರಣೆಯ ಬಗೆಯು ಅವರ ಅನುಭವಕ್ಕೆ ಬಂದಂತಾಗಬಹುದು.

---

## ೬ನೆಯ ಪ್ರಕರಣ—ಸರ್ಪಸಂಹಾರ.

ಹಿಂದೆ ಸದಾಶಿವೇಂದ್ರರು ಛಬ್ಬಿಯಿಂದ ಬಂದ ಭಕ್ತನಿಗೆ ಇನ್ನು ಸ್ವಲ್ಪ ದಿನಗಳಲ್ಲಿ ನಿಮ್ಮ ಊರಿಗೆ ಬರುತ್ತೇನೆಂದು ಹೇಳಿಕಳಿಸಿದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ಅದರಂತೆ ಆ ಭಕ್ತನು ಮತ್ತೊಮ್ಮೆ ದೇವರಿಗೆ ಕರೆಯಲಿಕ್ಕೆ ಬರಲು, ಸದಾಶಿವೇಂದ್ರರು ಛಬ್ಬಿಗೆ ಹೊರಟರು. ಊರಿಗೆ ಮುಟ್ಟಿದ ಬಳಿಕ ಅವರು ಕರೆಯಬಂದ ಭಕ್ತನೊಡನೆ ಊರೊಳಗೆ ಹೋಗದೆ, ಒಂದು ಗುಡಿಯಲ್ಲಿ ಹೊಕ್ಕರು. ಆಗ ಭಕ್ತನು—ಸ್ವಾಮಿ, ಮನೆಗೆ ಬರಬೇಕು ಈ ಗುಡಿಯಲ್ಲಿ ಒಂದು ಭಯಂಕರವಾದ ಹಾವು ಇರುವದರಿಂದ ರಾತ್ರಿಯ ವಾಸಕ್ಕೆ ಇದು ಯೋಗ್ಯವಾದದ್ದಲ್ಲ, ಅನ್ನಲು, ಸದಾಶಿವೇಂದ್ರರು—ನಮಗೆ ಮನೆಯು ತಕ್ಕದ್ದಲ್ಲ, ಗುಡಿಯೇ ತಕ್ಕದ್ದು. ನಾನು ಇಲ್ಲಿಯೇ ಇರುತ್ತೇನೆ, ಯಾರ ಮನೆಗೂ ಬರುವದಿಲ್ಲ, ಎಂದು ಸ್ಪಷ್ಟವಾಗಿ ಹೇಳಿದರು. ಕರಕೊಂಡು ಬಂದವನು ನಿರುಪಾಯನಾಗಿ ಮನೆಗೆ

ಹೋದನು. ಈ ಸುದ್ದಿಯು ಊರಲ್ಲೆಲ್ಲ ಹಬ್ಬಿ ಜನರು ಗುಡಿಗೆ ಬಂದು ಇಲ್ಲಿ ಇರಬಾರದೆಂದು ಪರಿಪರಿಯಾಗಿ ಹೇಳಿದರು. ಆದರೂ ಸದಾಶಿವೇಂದ್ರರು ಕೇಳದೆ ಗುಡಿಯಲ್ಲಿಯೇ ಇಳಕೊಂಡರು. ಆ ಛಬ್ಬಿಯ ಗ್ರಾಮದಲ್ಲಿ ಚೌಟಿ ಗದಿಗೈಯ್ಯನವರೆಂಬ ಮಾಂತ್ರಿಕರು ಇರುತ್ತಿದ್ದರು ಅವರಿಗೂ ಆ ಹಾವು ಅಸುಗೊಂಡಿದ್ದಿಲ್ಲ ಆ ದೇವಾಲಯವನ್ನು ಊರವರು ಯಮಾಲಯವೆಂದು ತಿಳಿದು, ಅದರ ಹತ್ತರ ಸುಳಿಯುತ್ತಿದ್ದಿಲ್ಲ ಎಷ್ಟೋ ಜನರು ಹಾವಿನ ಕಾಲಲ್ಲಿ ಪ್ರಾಣಕ್ಕೆ ಎರವಾಗಿದ್ದರು. ಗದಿಗಯ್ಯನವರು ಗುಡಿಗೆ ಹೋಗಿ ಸದಾಶಿವೇಂದ್ರನಿಗೆ—

ಗದಿಗಯ್ಯನವರು—ಸಾಧುಗಳ ಊರು ಯಾವದು?

ಸದಾಶಿವ—ಸಾಧುಗಳಿಗೆ ಒಂದೇ ಊರು ಅಲ್ಲವೆ?

ಗದಿಗಯ್ಯ—ಒಂದೇ ಊರವನಾದರೆ ಇಲ್ಲಿಗೆ ಯಾಕೆ ಬಂದೆ?

ಸದಾಶಿವ—ಘಟದ ಕಾರ್ಯವನ್ನು ಹೋಗಲಾಡಿಸುವದಕ್ಕೆ.

ಗದಿಗಯ್ಯ—ನಿನ್ನನ್ನು ಇಲ್ಲಿಗೆ ಕರತಂದವರಾರು?

ಸದಾಶಿವ—ಯಾರು ಕರತರಲಿಕ್ಕೇನು? ಪ್ರಾರಬ್ಧ ಭೋಗವು.

ಗದಿಗಯ್ಯ—ತಂದವರು ಪುಣ್ಯಾತ್ಮರೇ ಸರಿ.

ಸದಾಶಿವ—ಪುಣ್ಯಪಾಪದ ಹಂಗು ಆತ್ಮಕ್ಕೇನು?

ಗದಿಗಯ್ಯ—ಆತ್ಮವೇ ಹೋದಮೇಲೆ ನೀನುಮಾಡುವದೇನು?

ಸದಾಶಿವ—ಯಾವಾಗಾದರೂ ಮಾಡುವದನ್ನು ಮಾಡಿಯೇ ತೀರಬೇಕು.

ಗದಿಗಯ್ಯ—ಹಾಗಾದರೆ ನೀನು ಈ ಗುಡಿಯಲ್ಲಿರುವ ನಾಗೇಂದ್ರನಿಗೆ ಈವೊತ್ತಿನ ಆಹಾರವಾದೆ.

ಸದಾಶಿವ—ನಾಗೇಂದ್ರನು ಆತ್ಮಾನುಯಾಯಿಯಲ್ಲವೇ? ಅಂದ ಮೇಲೆ ಇಬ್ಬರಲ್ಲಿ ಭೇದವೇನು?

ಗದಿಗಯ್ಯ—ಎಲೋ ಹಾಗಲ್ಲ, ಈ ಗುಡಿಯಲ್ಲಿ ಒಂದು ಸರ್ಪವಿದೆ.

ಸದಾಶಿವ—ಸರ್ಪವು ಏನು ಮಾಡುವದು?

ಗದಿಗಯ್ಯ—ರಾತ್ರಿ ಇಲ್ಲಿ ಇದ್ದವರನ್ನು ಕಚ್ಚುತ್ತದೆ.

ಸದಾಶಿವ—ಕಚ್ಚಿದರೆ ಆಗುವದೇನು?

ಗದಿಗಯ್ಯ—ವಿಷವೇರಿ ಮೃತ್ಯುವು ಒದಗುವದು.

ಸದಾಶಿವ—ಸಂಸಾರವು ವಿಷವಲ್ಲವೋ? ನಿನಗೆ ಮೃತ್ಯುವಿಲ್ಲವೋ?

ಗದಿಗಯ್ಯ—ಮೃತ್ಯುವು ಒದಗುವ ಕಾಲ-ಕಾರಣಗಳು ಬೇರೆಯಲ್ಲವೆ?

ಸದಾಶಿವ—ಬ್ರಹ್ಮಪರಾಯಣತೆಗೆ ಕಾಲ-ಕಾರಣಗಳೇತಕ್ಕೆ?

ಗದಿಗಯ್ಯ—ಹಾಗಾದರೆ ವಿಷದಿಂದಲೇ ನಿನ್ನ ಮೃತ್ಯುವಿರಬಹುದು.

ಸದಾಶಿವ ಅದು ಬ್ರಹ್ಮಾರ್ಪಿತವಲ್ಲವೆ?

ಗದಿಗಯ್ಯ—ವಿಷವು ಉಗ್ರವಾದದ್ದಿರುತ್ತದೆ

ಸದಾಶಿವ—ಬ್ರಹ್ಮಾನಂದಕ್ಕೆ ಬಲವತ್ತರ ಕಾರಣವಾಯಿತಲ್ಲ.

ಗದಿಗಯ್ಯ—ಹಾಗಾದರೆ ನೀನು ಯಾರು ನಿನ್ನ ಹೆಸರೇನು?

ಸದಾಶಿವ—ನಾನು ನೀನೆ. ನನ್ನ ಹೆಸರು ಅನೇಕಕೋಟಿ ಬ್ರಹ್ಮಾಂಡ ಗಳಲ್ಲಿ ತುಂಬಿಹೋಗಿದೆ

ಗದಿಗಯ್ಯ—ಹಾಗಾದರೆ ನಿನ್ನ ಇಚ್ಛೆಯಿದ್ದಂತಾಗಲಿ. ನನ್ನಂಥ ಗಾರು ಡಿಗ ಸಾಹಸಿಗನಿಂದ ಈ ಸರ್ಪವನ್ನು ತಡೆಯುವದಾಗಲಿಲ್ಲ. ನಿನ್ನಪಾಡೇನು?

ಈ ಮೇರೆಗೆ ನುಡಿದು ಗದಿಗಯ್ಯನವರು ಹೊರಟು ಹೋದರು. ಊರೊ ಳಗಿನ ಜನರು ಗುಡಿಗೆ ಬಂದು ಸದಾಶಿವೇಂದ್ರರನ್ನು ಕೌತುಕದಿಂದ ನೋಡಿ ಹೋಗುತ್ತಲಿದ್ದರು ಅಷ್ಟರಲ್ಲಿ ಹೊತ್ತು ಮುಣುಗಿತು. ಸದಾಶಿವೇಂದ್ರರು ಸಂಧ್ಯಾಕಾರ್ಯಗಳನ್ನು ಮುಗಿಸಿಕೊಂಡು ಹಾಸುಗಲ್ಲಿನ ಮೇಲೆ ಕುಳಿತು ತಂಬಾಕು ಸೇದಿ, ತಪಸ್ಸನ್ನಾಚರಿಸುವದಕ್ಕಾಗಿ ಲಿಂಬಿಯ ಹಣ್ಣಿನಷ್ಟು ದೊಡ್ಡ ವಾದ ಕಲ್ಲುಗಳ ಹಾಸಿಗೆ ಹಾಸಿ, ದಂಡ-ಕಮಂಡಲು-ಕಾಷಾಯಾಂಬರಗಳನ್ನು ತಲೆಗಿಂಬಿಗಿಟ್ಟುಕೊಂಡು ಗರ್ಭಗುಡಿಯಬಾಗಿಲ ಮುಂಭಾಗದಲ್ಲಿ, ಬಾಗಿಲ ಒಂದು ತೋಳಬುಡದಿಂದ ಮತ್ತೊಂದು ತೋಳಬುಡದವರೆಗೆ ಕಂಸಾಕಾರದ ಗೆರೆ ಯನ್ನು ತೆಗೆದು, ಪರಬ್ರಹ್ಮ ಮಂತ್ರವನ್ನು ಜಪಿಸಿ—ಎಲೇ ನಾಗೇಂದ್ರಾ, ನೀನು ಬರುವದಾದರೆ ಇಲ್ಲಿಯ ತನಕ ಬಂದು ನಿಂತು ನನಗೆ ದರ್ಶನಕೊಡು, ಎಂದು ಅನ್ನುತ್ತ ತಮ್ಮ ಹರಳು ಹಾಸಿಗೆಯ ಮೇಲೆ ಬಂದು ಮಲಗಿಕೊಂಡರು. ಮಧ್ಯ ರಾತ್ರಿಯಾಯಿತು. ಊರೊಳಗಿಂದ ಕೇಳಿಬರುವ ಜನರ ಗದ್ದಲವು ನಿಂತಿತು. ಗಾಳಿಯು ಸುಳಿಯದಾಯಿತು. ಯಾವಾಗಾದರೊಮ್ಮೆ ನಾಯಿಗಳು ಗುರುಗು ಟ್ಟುತ್ತಿದ್ದವು ಹುಣ್ಣಿವೆಯ ಮರುದಿನವಾದ್ದರಿಂದ ಚಂದ್ರನು ಏನೊಂದೂ ಕಲಂಕವಿಲ್ಲದವನಾಗಿ ಝುಗಝುಗಿಸುತ್ತಿದ್ದನು. ಆಕಾಶದಲ್ಲಿ ನಕ್ಷತ್ರಗಳು ವಿರಲ ವಾಗಿ ಮಿನುಗುತ್ತಿದ್ದವು. ಅಂಜುಬುರುಕರಿಗೆ ಅಂಜಿಕೆಯನ್ನುಂಟುಮಾಡುವ ಇಂಥ ಭಯಂಕರಕಾಲದಲ್ಲಿ ಸದಾಶಿವೇಂದ್ರರು ಊರೊಳಗಿನ ಯಾರ ಮಾತನ್ನೂ ಕೇಳದೆ ಹರಳ ಹಾಸಿಗೆಯಮೇಲೆ ಪವಡಿಸಿದ್ದರು. ಅವರು ತಮ್ಮ ಬ್ರಹ್ಮಾನಂ

ದದ ಭರದಲ್ಲಿ ಭ್ರೂಮಧ್ಯಸ್ಥಾನದಲ್ಲಿ ದೃಷ್ಟಿಯನ್ನು ನಿಲ್ಲಿಸಿಕೊಂಡು ಸ್ವಯಂಪ್ರಕಾಶವನ್ನು ನೋಡುತ್ತ ಆನಂದಪಡುತ್ತಿರಲು, ಗಚ್ಚಿನ ಗರ್ಭಗುಡಿಯಲ್ಲಿ ಭೋರೆಂಬ ಕರ್ಕಶವಾದ ಸಪ್ಪಳವು ಕೇಳಿಸಹತ್ತಿತು ಆ ಸಪ್ಪಳದ ಕಡೆಗೆ ಸದಾಶಿವೇಂದ್ರರ ಲಕ್ಷವು ಹೋಗಲು, ಅವರು ಭ್ರೂಮಧ್ಯಸ್ಥಾನದಿಂದ ದೃಷ್ಟಿಯನ್ನು ಕಿತ್ತು, ಇದು ಏನೆಂದು ನೋಡುತ್ತಿರುವಷ್ಟರಲ್ಲಿ ಬಾಯಿಂದ ಫೂತ್ಕಾರ ಧ್ವನಿಯನ್ನು ಮಾಡುತ್ತ ಕೆಂಗಣ್ಣುಗಳಿಂದ ನೋಡುತ್ತ ಭಯಂಕರವಾದ ಸರ್ಪವು ಗರ್ಭಗುಡಿಯ ಬಾಗಿಲಿಗೆ ಬಂದಿತು. ಹೊರಗಿನ ಸ್ವಚ್ಛವಾದ ಬೆಳದಿಂಗಳ ಕಾಂತಿಯು ಗುಡಿಯೊಳಗೆ ಮಸಮಸಕಾಗಿ ಬಿದ್ದಿದ್ದರಿಂದ ಆ ಮಂದಪ್ರಕಾಶದಲ್ಲಿ ಭಯಂಕರ ಸರ್ಪವು ಮತ್ತಿಷ್ಟು ಉಗ್ರವಾಗಿ ತೋರಿತು ಸರ್ಪವು ಸುತ್ತುಮುತ್ತು ನೋಡುವದಕ್ಕಾಗಿ ತನ್ನ ಹೆಡೆಯನ್ನು ನಾಲ್ಕೂ ಕಡೆಗೆ ತಿರುಗಿಸುತ್ತ ಸ್ವಲ್ಪ ಹೊತ್ತು ನಿಂತುಕೊಂಡಿತು.

ಬಳಿಕ ಸರ್ಪವು ಏನೋ ಯೋಚಿಸಿದಂತೆ ಹೊಸ್ತಿಲದ ಮೇಲ್ಭಾಗದಲ್ಲಿದ್ದ ತನ್ನ ಹೆಡೆಯನ್ನು ಮೇಲಕ್ಕೆಬ್ಬಿಸಿ, ಹಾಗೇ ಮುಂದಕ್ಕೆ ಬಂದು ಸದಾಶಿವೇಂದ್ರರು ಬರೆದ ಮಂತ್ರಸಿದ್ಧವಾದ ಮಂಡಲರೇಖೆಯ ಸಮೀಪಕ್ಕೆ ಬಂದು, ಹೆಡೆಯನ್ನು ಎತ್ತಿ ರಪ್ಪೆಂದು ಅಪ್ಪಳಿಸಹತ್ತಿತು. ಇದೆಲ್ಲವನ್ನು ಲಕ್ಷಗೊಟ್ಟು ನೋಡುತ್ತ ಕುಳಿತುಕೊಂಡಿದ್ದ ಸದಾಶಿವೇಂದ್ರರು, ಅದರ ನಾಶಕ್ಕಾಗಿ ಯಾವ ಉಪಾಯವನ್ನೂ, ಯೋಚಿಸದೆ, ಸುಮ್ಮನೆ ನೋಡುತ್ತ ಕುಳಿತುಕೊಂಡಿರಲು, ಸರ್ಪವು ನಾಲ್ಕೈದು ಸಾರೆ ಹಿಂದಕ್ಕೆ ಹೋಗಿ ಮುಂದಕ್ಕೆ ಬಂದು ಮುಂದೆಯಿದ್ದ ಮಂಡಲರೇಖೆಯ ಮೇಲೆ ರಪ್ಪೆಂದು ಅಪ್ಪಳಿಸುತ್ತ, ತನ್ನ ಸಿಟ್ಟಿನ ರಭಸವನ್ನು ತೋರಿಸುತ್ತ ಬೇಸತ್ತಿತು.. ಬಳಿಕ ಅದು ಸದಾಶಿವೇಂದ್ರರ ಕಡೆಗೆ ನೋಡಿ ಮತ್ತೊಮ್ಮೆ ಫೂತ್ಕಾರ ಧ್ವನಿಮಾಡಿ ಒಂದು ಆಳಉದ್ದ ಮೇಲಕ್ಕೆ ಎದ್ದು ಧಪ್ಪನೆ ಮಂಡಲರೇಖೆಯ ಮಧ್ಯದಲ್ಲಿ ಬಿದ್ದು ಹೊಟ್ಟೆ ಮೇಲಾಗಿ ಮಲಗಿಕೊಂಡಿತು. ಆಗ ಸದಾಶಿವೇಂದ್ರರು ತಮ್ಮ ಹತ್ತರ ಇಟ್ಟುಕೊಂಡಿದ್ದ ಮಂತ್ರಸಿದ್ಧವಾದ ಹರಳನ್ನು ಆ ಸರ್ಪದ ಮೇಲೆ ಒಗೆದರು. ಆಗ ಸರ್ಪದ ದೇಹದೊಳಗಿಂದ ಒಂದು ಪ್ರಕಾಶವು ಹೊರಟು "ಧನ್ಯ-ಧನ್ಯ" ಎಂಬ ಶಬ್ದವು ಉಂಟಾಗುತ್ತಿರಲು, ಅದೃಶ್ಯವಾಯಿತು. ಅಷ್ಟರಲ್ಲಿ ಮೂಡಲಗೆಂಪು ಹರಿಯಿತು. ಸದಾಶಿವೇಂದ್ರರು ಎದ್ದು ತಮ್ಮ ಹಾಸಿಗೆಯ ಬುಡದಲ್ಲಿ ಹಾಕಿಕೊಂಡಿದ್ದ ಹರಳುಗಳನ್ನು ಚೆಲ್ಲಿಕೊಟ್ಟು, ಪುನಃ ಆಸನವನ್ನು ಹಾಕಿಕೊಂಡು ತಂಬಾಕವನ್ನು ಮಿದ್ದುತ್ತ ಕುಳಿತುಕೊಂಡರು. ತಂಬಾಕವು

ಸಿದ್ಧಿ ಸಿದ್ಧವಾದ ಮೇಲೆ, ತಮ್ಮ ಒಹುದೊಡ್ಡದಾದ ಚಿಲಿಮೆಯಲ್ಲಿ ಅದನ್ನು ತುಂಬಿ ಬೆಂಕಿಯನ್ನು ಹೊತ್ತಿಸಿ ಶಂಭುಲಿಂಗಚರಮೂರ್ತಿಯನ್ನು ಧ್ಯಾನಸ್ತೋತ್ರಾದಿಗಳಿಂದ ಮೂರ್ತಿಗೊಳಿಸಿ ಕರೆದು, ಆನಂದದೊಡನೆ ಚಿಲಿಮೆಯನ್ನು ಬಾಯಿಗೆ ಹಚ್ಚಿ ಸೇದುತ್ತ ಹೊಗೆ ಬಿಡುತ್ತ ಕುಳಿತುಕೊಂಡರು. ಅಷ್ಟರಲ್ಲಿ ಒಂದು ತಾಸು ಹೊತ್ತು ಏರಿತು.

ಇತ್ತ ನಿನ್ನೆ ದುರಾಲೋಚನೆ ಮಾಡುತ್ತ ಮನೆಗೆ ಹೋಗಿದ್ದ ಜನರು ಗುಡಿಯಲ್ಲಿ ಮರಣಹೊಂದಿದ ಸಾಧುವಿಗೆ ಮಣ್ಣು ಕೊಡಬೇಕೆಂದು ಗುಡಿಗೆ ಬಂದು ನೋಡಲು, ಅದೇ, ಗಾಂಜಿಯನ್ನು ಸೇದಿ, ಆನಂದದಲ್ಲಿ ಕಣ್ಣು ಮುಚ್ಚಿಕೊಂಡು ಗದ್ದಕ್ಕೆ ಯೋಗದಂಡವನ್ನು ಆನಿಸಿಕೊಂಡು, ಕುಳಿತಿದ್ದ ಸಾಧುಗಳ ಅಚಲಿತವಾದ ದಿವ್ಯದೇಹವು ಅವರ ದೃಷ್ಟಿಗೆ ಬಿದ್ದಿತು. ಆಗ ಅದನ್ನು ನೋಡಿ ಸರ್ವರೂ ಈತನು ಪಂಚತ್ವವನ್ನು ಹೊಂದಿದನೆಂದು ಮರಗುತ್ತ ತೀರ ಸಮೀಪಕ್ಕೆ ಬಂದು ನೋಡುವಷ್ಟರಲ್ಲಿ ಸಾಧುಗಳು ಶ್ವಾಸೋಚ್ಛ್ವಾಸ ಬಿಡುವರೆಂಬದು ಗೊತ್ತಾಯಿತು. ಅತ್ತ ಭಯಂಕರವಾದ ಸರ್ಪವು ಹೊಟ್ಟೆಮೇಲೆ ಮಾಡಿಕೊಂಡು ಬಿದ್ದಿತ್ತು. ಇದನ್ನು ನೋಡಿ ಜನರು ಬೆರಗಾಗಿ ನಿಂತಲ್ಲಿ ನಿಂತುಬಿಟ್ಟರು ಆಶ್ಚರ್ಯದ ಭರದಲ್ಲಿ ಯಾರ ಬಾಯಿಂದಲೂ ಶಬ್ದಗಳು ಹೊರಡಲಿಲ್ಲ ಆಗಿನ ಕಾಲವು ಅವರೆಲ್ಲರಿಗೂ ಸ್ವಪ್ನದಂತೆ ಭಾಸವಾಯಿತು. ಸ್ವಲ್ಪ ಹೊತ್ತಿನ ಮೇಲೆ ಅವರು ಸದಾಶಿವೇಂದ್ರರನ್ನು ನಮಸ್ಕರಿಸಿ ಸ್ತೋತ್ರಮಾಡಿ ಅಪರಾಧದ ಒಗ್ಗೆ ಕ್ಷಮೆಯನ್ನು ಬೇಡಹತ್ತಿದರು. ಸಾಧುಗಳ ಮನಸ್ಸಂಕೋಚವು ಅಕಲ್ಯಾಣಕಾರಕವೆಂದು ತಿಳಿತಿಳಿಗಿ ಅವರು ಸದಾಶಿವೇಂದ್ರರ ಕ್ಷಮೆಯನ್ನು ಯಾಚಿಸಹತ್ತಿದರು. ಆಗ ಸದಾಶಿವೇಂದ್ರರು ಕಣ್ದೆರೆದು ಅವರನ್ನು ನೋಡಿ—ಎಲ್ಲೈ, ನೀವನ್ನುವದೇನು? ನನ್ನನ್ನು ಇಷ್ಟು ಯಾಕೆ ಹೊಗಳುತ್ತೀರಿ? ಪ್ರಾಣಿಗಳು ತಮ್ಮ ತಮ್ಮ ಕರ್ಮದಂತೆ ಫಲವನ್ನು ಹೊಂದುತ್ತವಾದ್ದರಿಂದ, ಸರ್ಪವು ತನ್ನ ಕರ್ಮದ ಫಲವನ್ನು ಹೊಂದಿರಲು, ನಾನು ಮಾಡಿದ ಮಹತ್ಕಾರ್ಯವೇನು? ಅನ್ನಲು, ಅವರು—ಸ್ವಾಮಿ, ಈವರೆಗೆ ಸರ್ಪದ ಭೀತಿಯಿಂದ ನೆರೆಹೊರೆಯ ಹಳ್ಳಿಯ ಜನರು ಕೂಡ ಚಿಂತಾಕ್ರಾಂತರಾಗಿದ್ದರು ಅಂಥ ಚಿಂತೆಯ ನಿವಾರಣವನ್ನು ಇಂದು ತಾವು ಮಾಡಿದ್ದು ಸಾಮಾನ್ಯ ಕೆಲಸವೇ? ಎಂದರು. ಅದಕ್ಕೆ ಸದಾಶಿವೇಂದ್ರರು—ಇರಲಿ, ಶಾಪಾದಿ ಕಾರಣದಿಂದ ತನ್ನ ಕರ್ಮದ ಫಲವನ್ನು ಭೋಗಿಸುವದಕ್ಕಾಗಿ ಜನಿಸಿದ ಸರ್ಪದ ಪರಿಪಕ್ವಕಾಲವು ಒದಗಿದ್ದರಿಂದ, ಇಂದು ಕೃತಾರ್ಥವಾಗಿ

ಗುರ್ವನುಗ್ರಹಕ್ಕೆ ನನ್ನನ್ನು ಈಡುಮಾಡಿತು! ಎಂದು ಹೇಳಿದರು. ಹಿಂದೆ ಒಂದು ಪ್ರಕರಣದಲ್ಲಿ ಶಕೆ ೧೬೦೦ರ ಮಾಘವದ್ಯ ಪ್ರತಿಪದೆಯ ದಿವಸ ರಾತ್ರಿ ಎಂಟು ತಾಸಿನವರೆಗೆ ಸುಮ್ಮನೆ ಕುಳಿತಿದ್ದ ಚರಂತಪ್ಪನು ಒಮ್ಮೆಲೆ ಎಚ್ಚತ್ತು—"ಹಾ! ಸದಾಶಿವಾ! ಉರಗರಾಜನು ಬಲಿಷ್ಠನಿರುವನು ಅಹುದಹುದು, ಗುರುಪುತ್ರ ನಹುದಲಾ" ಎಂದು ನುಡಿದದ್ದು ವಾಚಕರ ಸ್ಮರಣದಲ್ಲಿರಬಹುದು. ಈ ಸಂಗತಿ ಯನ್ನು ಸದಾಶಿವೇಂದ್ರರು ಈಗಾಡಿದ "ನನ್ನನ್ನು ಗುರ್ವನುಗ್ರಹಕ್ಕೆ ಈಡು ಮಾಡಿತು!" ಎಂಬ ಮಾತಿಗೆ ಹೊಂದಿಸಿಕೊಂಡರೆ, ಆ ಮಹಾತ್ಮರಾದ ಗುರು-ಶಿಷ್ಯರ ಪರಸ್ಪರ ಸಂಬಂಧವು ಮನಸ್ಸಿನಲ್ಲಿ ಬರಬಹುದು ಧಬ್ಬಿಯವರು ಸರ್ಪಕ್ಕೆ ಅಗ್ನಿಸಂಸ್ಕಾರಮಾಡಿ, ಸದಾಶಿವೇಂದ್ರರನ್ನು ಊರಲ್ಲಿ ಕರೆದೊಯ್ದು ಉತ್ಸವಮಾಡಿ, ಅವರ ಸಲುವಾಗಿ ನಿವಾಂತಸ್ಥಳದಲ್ಲಿ ಒಂದು ಮಠವನ್ನು ಕಟ್ಟಿಸಿ, ಅದಕ್ಕೆ ಸಾಧುಸದಾಶಿವಸ್ವಾಮಿಯ ಮಠವೆಂದು ಹೆಸರಿಟ್ಟರು. ಅದನ್ನು ಈಗ ಲಾದರೂ ಕಾಣಬಹುದು.

---

## ೭ನೆಯ ಪ್ರಕರಣ — ಸದ್ಗುರು ಸಾನ್ನಿಧ್ಯ.

ಹೀಗೆ ಸದಾಶಿವೇಂದ್ರರು ಸರ್ಪವನ್ನು ನಾಶಗೊಳಿಸಿದ ಕೀರ್ತಿಯು ನಾಲ್ಕೂ ಕಡೆಗೆ ಹಬ್ಬಿ, ಗಂಜೀಗಟ್ಟಿಗೂ ಬಂದು ಮುಟ್ಟಿತು. ಅದನ್ನು ಕೇಳಿ ಚರಂತಪ್ಪನು ಬಾಯಿಂದ ಏನೋ ಗುಣುಗುಟ್ಟುತ್ತ ಅಲ್ಲಿಂದ ಎದ್ದು, ತಾನು ನಿತ್ಯದಲ್ಲಿ ಕೂಡ್ರುತ್ತಿದ್ದ ಶಮೀವೃಕ್ಷದ ಬುಡಕ್ಕೆ ಹೋದನು. ಅಲ್ಲಿ ಸ್ವಲ್ಪ ಹೊತ್ತು ಕುಳಿತುಕೊಂಡು, ಅಲ್ಲಿದ್ದ ತನ್ನ ಪುಸ್ತಕ ಮೊದಲಾದ ಸಾಮಾನುಗ ಳನ್ನು ತಕ್ಕೊಂಡು ಸುತ್ತುಮುತ್ತಲಿನ ಗ್ರಾಮಗಳಲ್ಲಿ ಭಿಕ್ಷೆಯನ್ನು ಬೇಡುತ್ತ "ಎಲೇ, ಸದಾಶಿವನನ್ನು ಕಾಣಲಿಕ್ಕೆ ಬರುವಿರೇನೆಲೆ" ಎಂದು ಒದರಾಡುತ್ತ ಕಾರ ಡಗಿ ಎಂಬ ಗ್ರಾಮಕ್ಕೆ ಒಂದನು. ಕಾರಡಗಿಯು ಧಾರವಾಡಜಿಲ್ಲೆಯಲ್ಲಿ ಸಿಗ್ಗಾವಿ ತಾಲೂಕಿನಲ್ಲಿರುತ್ತದೆ. ಇದು ಬಹು ಸಧನಗ್ರಾಮವು. ತೋಟಪಟ್ಟಿಗಳಿಂದ ಆ

ಗ್ರಾಮಕ್ಕೆ ವಿಶೇಷ ಶೋಭೆಯು ಬಂದಿರುತ್ತದೆ. ಇಲ್ಲಿಯ ಎರೆಯ ನೆಲವು ಬಹು ಬೆಳೆಯುಳ್ಳದ್ದು ಈ ಊರ ಶ್ರೀವೀರಭದ್ರ ದೇವರು ಬಹು ಪ್ರಸಿದ್ಧ ದೇವರಿಗೆ ತ್ರಿಕಾಲಪೂಜೆಯಿರುವದು. ಭಕ್ತರು ಪರ್ವ ಮೊದಲಾದವುಗಳ ನೆವದಿಂದ ಆಗಾಗ್ಗೆ ಅನ್ನಸಂತರ್ಪಣವನ್ನು ಮಾಡುವರು ಒಂದು ದಿನ ಛಬ್ಬಿಯೊಳಗಿನ ಒಬ್ಬ ಸದ್ಗೃಹಸ್ಥನು ಗಣಾರಾಧನೆಯನ್ನು ಮಾಡುವದಕ್ಕಾಗಿ ಕಾರಡಿಗಿಯ ಶ್ರೀವೀರಭದ್ರದೇವಸ್ಥಾನಕ್ಕೆ ಬಂದನು ಸದಾಶಿವೇಂದ್ರರು ಆ ಪ್ರೇಮಲಭಕ್ತನ ಸದ್ಭಾವಕ್ಕೆ ಮೆಚ್ಚಿ, ಗಣಾರಾಧನೆಗೆ ಕಾರಡಿಗೆಗೆ ದಯಮಾಡಿಸಿದ್ದರು ಭೋಜನ ಕಾಲವು ಸಮೀಪಿಸಿತು ವೀರಶೈವಧರ್ಮದ ಶಿಷ್ಟಾಚಾರಕ್ಕನುಸರಿಸಿ ಜಂಗಮ ಮೂರ್ತಿಗಳ ಪೂಜೆಗೆ ಆರಂಭವಾಯಿತು ಆ ವೀರಭದ್ರದೇವರ ಗುಡಿಯಲ್ಲಿ ಅಗ್ರಪೂಜೆಗೊಳ್ಳುವ ಅಧಿಕಾರವು ಮಾದಾಪುರದ ಹಿರೇಮಠದವರಿಗೆ, ಅಂದರೆ ನಮ್ಮ ಹುಚ್ಚ ಶಂಭುಲಿಂಗ ಚರಮೂರ್ತಿಗಳ ಮನೆತನದವರಿಗೆ ಮೊದಲಿನಂತೆ ನಡೆದು ಬಂದಿತ್ತು ಅದರಂತೆ ಮಾದಾಪುರದ ಹಿರಿಯ ಮಠದವರು ಅಲ್ಲಿಗೆ ಬಂದಿದ್ದರು. ಯಥಾ ಸಾಂಗವಾಗಿ ಪೂಜಾ-ಪುನಸ್ಕಾರಗಳು ಆಗಿ ಭೋಜ ನಕ್ಕೆ ಕುಳಿತುಕೊಳ್ಳುವ ವಿಜ್ಞಾಪನೆಯು ನಮಸ್ಕಾರವು ಯಜಮಾನನಿಂದ ಮಾಡ ಲ್ಪಟ್ಟಿತು. ಆ ಪಂಗ್ತಿಯಲ್ಲಿ ಸದಾಶಿವೇಂದ್ರರೂ ಕುಳಿತುಕೊಂಡಿದ್ದರು. ಅಲ್ಲಿಗೆ ಆಕಸ್ಮಿಕವಾಗಿ ನಮ್ಮ ಹುಚ್ಚ ಚರಂತಪ್ಪನೂ ಬಂದಿದ್ದನು

ಹೀಗಿರುವಾಗ ನೆರೆದ ಜನರಲ್ಲಿ ಒಬ್ಬನು ದೇವರ ಪ್ರಸಾದವನ್ನು ಎಲ್ಲರಿಗೂ ಕೊಡಬೇಕೆಂದು ಕೊಬ್ಬರಿಯನ್ನು ಎಬ್ಬುವದಕ್ಕಾಗಿ ಒಂದು ಕುರ್ಚಿಗೆಯನ್ನು ತರಹೇಳಿದನು ಆ ಮೇಲೆ ಕುರ್ಚಿಗೆಯಿಂದ ಕೊಬ್ಬರಿಯನ್ನು ಎಬ್ಬಿ ಹೋಳುಗ ಳನ್ನು ಎಲ್ಲರಿಗೂ ಕೊಡಹೋಗಲು, ಹುಚ್ಚ ಚರಂತಪ್ಪನು—ಕೊಬ್ಬರಿಯು ವಿಷವದೆ, ಕೊಡಬೇಡಿರೆಂದು ಹೇಳಿದನು ಜನರು ಆತನ ಮಾತಿಗೆ ನಕ್ಕು ಕೊಬ್ಬರಿಯನ್ನು ಹಂಚಿ ತಾವೂ ಪ್ರಸಾದವನ್ನು ಸ್ವೀಕರಿಸಲು, ಕೊಬ್ಬ ರಿಯು ಕಹಿ ಹತ್ತಿತು. ಆಗ ಜನರು ಆಶ್ಚರ್ಯಪಟ್ಟು, ಈ ಹುಚ್ಚನಲ್ಲಿ ಏನೋ ಚಮತ್ಕಾರವಿರುತ್ತದೆಂದು ತಿಳಿದರು. ಕೆಲವರು ಚರಂತಪ್ಪನನ್ನು ಕುರಿತು—ಸ್ವಾಮಿ, ಈ ಕೊಬ್ಬರಿಯು ವಿಷಹತ್ತುವ ಕಾರಣವೇನೆಂದು ಕೇಳಲು, ಚರಂತಪ್ಪನು—ಆ ಕುರ್ಚಿಗೆಯಿಂದ ತಾಳಸರವನ್ನು ಕೊಯ್ದಿರುತ್ತದಾದ್ದರಿಂದ ವಿಷಹತ್ತುತ್ತದೆ, ಎಂದು ಹೇಳಿದನು. ಈ ಮಾತು ಸತ್ಯವೆಂದು ಮನಗಂಡ ಬಳಿಕ ಜನರು. ಚರಂತಪ್ಪನು ಸಾಧಾರಣ ಮನುಷ್ಯನಲ್ಲೆಂದು ಅಂದುಕೊಳ್ಳ

ಹತ್ತಿದರು. ಊಟವು ನಡೆದಿತ್ತು. ಆಗ ಚರಂತಪ್ಪನು "ಏ ಮೈಸೂರ" ಎಂದು ಕೂಗಿ ಅರಿಯ ಬಾರದವನಂತೆ ಉಣ್ಣುತ್ತ ಕುಳಿತುಕೊಂಡನು. ಈ ಮಾತು ಸದಾಶಿವೇಂದ್ರರ ಮನಸ್ಸಿಗೆ ನಟ್ಟದ್ದರಿಂದ ಅವರು ನಾಲ್ಕೂ ಕಡೆಗೆ ನೋಡಿದರು ಆದರೆ ತಮ್ಮನ್ನು ಯಾರು ಕರೆದರೆಂಬದು ಅವರಿಗೆ ಗೊತ್ತಾಗಲಿಲ್ಲ. ಹೀಗೆ ಎರಡು ಮೂರುಸಾರ ಆಯಿತು ನಾಲ್ಕನೆಯ ಸಾರೆ ಚರಂತಪ್ಪನು ಕರೆಯಲಿಕ್ಕೂ ಸದಾಶಿವೇಂದ್ರರು ನೋಡಲಿಕ್ಕೂ ಗಂಟೇಬದ್ದಿತು. ಮೊದಲಿನಿಂದ ಅವರಿಬ್ಬರು ಒಬ್ಬರನ್ನೊಬ್ಬರು ಕಣ್ಣು ತಪ್ಪಿಸಿ ನೋಡುತ್ತಲೇ ಇದ್ದರು. ಈತನು ತನ್ನ ಪ್ರಿಯನಾದ ಸದಾಶಿವೇಂದ್ರನೆಂಬ ಗುರುತು ಶಂಭುಲಿಂಗ ಚರಮೂರ್ತಿಗಳಿಗೆ ಹತ್ತಿತ್ತು, ಆದರೆ ಈತನೇ ತನ್ನ ಗುರುವೆಂಬ ನಿಶ್ಚಯವು ಸದಾಶಿವೇಂದ್ರರಿಗೆ ಆಗಿದ್ದಿಲ್ಲ ಅವರಿಗೆ ಸಂಶಯವೇನೋ ಬಂದಿತ್ತು, ಆದರ ಸಂಶಯವು ನಿಜವಾಗದ ಪಕ್ಷದಲ್ಲಿ ತಮ್ಮ ಊಹನೆಗೆ ಕುಂದು ಬರುವದೆಂಬ ಅಭಿಮಾನದಿಂದ ಸದಾಶಿವೇಂದ್ರರು ಚರಮೂರ್ತಿಗಳನ್ನು ಮಾತಾಡಿಸಲಲ್ಲ. ಕಡೆಯಸಾರೆ ಅವರಿಬ್ಬರ ದೃಷ್ಟಿಗಳು ಕೂಡಲು, ಸದಾಶಿವೇಂದ್ರರು "ಯಾಕೆ" ಎಂದು ಪ್ರಶ್ನೆ ಮಾಡಿದರು ಅದಕ್ಕೆ ಚರಮೂರ್ತಿಗಳು "ಎಲ್ಲಿಯದೆ" ಎಂದು ತಿರುಗಿ ಉತ್ತರ ಕೊಟ್ಟರು ಉರ್ವಕೊಂಡಿಯಲ್ಲಿದ್ದಾಗಿನ ಗುರುತು ಶದಾಶಿವೇಂದ್ರರಿಗೆ ಸ್ವಲ್ಪ ಸ್ವಲ್ಪಹತ್ತಿ, ಅವರು ಚರಂತಪ್ಪನನ್ನು ದಿಟ್ಟಿಸಿ ನೋಡಹತ್ತಿದರು. ಆಗ ಚರಂತಪ್ಪನು ಊಟವನ್ನು ಬಿಟ್ಟು ಮೇಲಕ್ಕ ಎದ್ದು—ಏ ಮೈಸೂರ ಚಿಲಿಮೆಯನ್ನು ಕೊಡುವಯಾ ತಂಬಾಕ ಸೇದುತ್ತೇನೆ, ಎಂದು ಕೇಳಲು, ಸದಾಶಿವೇಂದ್ರರು ಊಟವನ್ನು ಮುಗಿಸಿಕೊಂಡು ಕೊರಳಲ್ಲಿ ಲಿಂಗವನ್ನು ಧರಿಸಿಕೊಂಡು ಬಂದು ತಮ್ಮ ಜೋಳಿಗೆಯಲ್ಲಿದ್ದ ಎರಡು ಗಾಂಜಿಯ ಕಲ್ಲಿಗಳನ್ನು ಚರಂತಪ್ಪನ ಕೈಯಲ್ಲಿ ಕೊಟ್ಟರು. ಆಗ ಚರಂತಪ್ಪನು ತನ್ನ ಎರಡು ಹಸ್ತಗಳನ್ನೇ ಚಿಲಮೆಯಹಾಗೆಮಾಡಿ ಬೆಂಕಿಯಿಲ್ಲದೆ ಸರ್‍ರನೆ ಸೇದಿ ಗಾಂಜಿಯನ್ನು ಸುಟ್ಟು ಬೂದಿ ಮಾಡಿದನು. ಬಳಿಕ ಆತನು ಸದಾಶಿವೇಂದ್ರರನ್ನು ಕುರಿತು "ಎಲ್ಲಿಯದೆ ತಂಬಾಕ" ಎಂದು ಕೇಳಲು, ಊರೊಳಗೆ ನಡ, ಕೊಡುತ್ತೇನೆ, ಎಂದು ಸದಾಶಿವೇಂದ್ರರು ಅಂದರು. ಆಗ ಅವರಿಬ್ಬರು ಊರೊಳಗೆ ಹೊರಟರು. ಮೂರುಸಂಜೆಯ ಹೊತ್ತು ಆಗಿತ್ತು ಚರಂತಪ್ಪನು ಹೋಗಹೋಗುತ್ತ ಹಾದಿಯಲ್ಲಿ ಹತ್ತಿದ ಮಸೀದೆಯನ್ನು ಹೊಕ್ಕು ಅಲ್ಲಿಂದಲೇ ಸದಾಶಿವೇಂದ್ರರನ್ನು ಕುರಿತು—ಏ ಮೈಸೂರ, ಇಲ್ಲಿ ತಂಬಾಕ

ನೋಡೋಣ ಬಾ, ಎಂದು ಕರೆದರು. ಆದರೆ ಸದಾಶಿವೇಂದ್ರರು ಕರ್ಮನಿಷ್ಠ ರಾದ್ದರಿಂದ ತಮ್ಮ ಪೂಜಾಸಾಮಗ್ರಿಗಳನ್ನು ಮಸೀದೆಯೊಳಗೆ ತಕ್ಕೊಂಡು ಹೋಗಲಾರದೆ "ಇಲ್ಲಿ ಬೇಡ, ಊರೊಳಗೆ ಬಾ, ನೋಡೋಣ" ಎಂದು ಕರೆದರು. ಅದಕ್ಕೆ ಚರಂತಪ್ಪನು 'ನಾನು ಒಲ್ಲೆನೆ'ನ್ನಲು, ಸದಾಶಿವೇಂದ್ರರು ಮತ್ತೆ ಎರಡು ಕಲ್ಲಿ ಗಾಂಜಿಯನ್ನು ಚರಂತಪ್ಪನಿಗೆ ಕೊಡಹೋದರು, ಆದರೆ ಚರಂತಪ್ಪನು ಗಾಂಜಿಯನ್ನು ತಕ್ಕೊಳ್ಳದೆ ಚಿಲಿಮೆಯನ್ನು ಕೇಳಲು, ಕರ್ಮನಿರತರಾದ ಸದಾ ಶಿವೇಂದ್ರರು ಸಂಶಯಪಟ್ಟು ಚಿಲಮೆಯನ್ನು ಕೊಡದಾದರು. ಆಗ ಚರಂ ತಪ್ಪನು—

ಚರಂತಪ್ಪ—ಎಲೋ, ಸಂಶಯಕ್ಕೆ ಎಡೆಯಾದ ನೀನು, ಸಂಶಯರಹಿತ ವಾದ ಪರಿಪೂರ್ಣತ್ವದ ಪ್ರಾಪ್ತಿಗಾಗಿ ಹಂಬಲಿಸುವದು ಡಾಂಭಿಕತನವಲ್ಲವೆ?

ಸದಾಶಿವೇಂದ್ರ—ಡಾಂಭಿಕತನವು ಹ್ಯಾಗೆ? ಕರ್ಮನಿಷ್ಠರಿಗೆ ಪರಿಪೂರ್ಣ ತ್ವವು ಇಲ್ಲವೋ? ಪೂರ್ಣತ್ವಕ್ಕೂ, ಕರ್ಮಕ್ಕೂ ಸಂಬಂಧವೇನು? ಕರ್ಮವು ಮನಸ್ಸನ್ನು ಸ್ಥಿರಗೊಳಿಸುತ್ತದೆಯಾದ್ದರಿಂದ, ಬಹಿಃಕರ್ಮವಿದ್ದರೂ ಅಂತರಂಗವು ನಿರ್ಲಿಪ್ತತೆಯನ್ನು ಹೊಂದಿರಬಹುದು.

ಚರಂತಪ್ಪ—ಕರ್ಮವೇ ಮಹತ್ವದ್ದೆಂದು ತಿಳಿದು, ಐಹಿಕ ಸುಖವನ್ನು ಭೋಗಿಸಿದರೆ ಅದಕ್ಕೆ ಮೂಲಕಾರಣವೇನು?

ಸದಾಶಿವೇಂದ್ರ—ಅದಕ್ಕೆ ಭವವೇ ಮೂಲಕಾರಣವು.

ಚರಂತಪ್ಪ—ಭವವು ಮೂಲಕಾರಣವಿಲ್ಲದಿದ್ದರೆ, ಕರ್ಮಕ್ಕೆ ಬೇರೆಕಾರಣ ವೇನಿರಬೇಕು?

ಸದಾಶಿವೇಂದ್ರ—ಅದು ಕಂಡವರಿಗೆ ಗೊತ್ತು, ಒಂದುವೇಳೆ ಅದು ಸಹ ಜವೆನ್ನಬಹುದು.

ಚರಂತಪ್ಪ—ಹಾ, ಹೌದು, ಈಗ ಮಾತ್ರ ಹಣ್ಣಿಗೆ ಬಂದಿರುತ್ತೀ. ಹಾಗಾದರೆ ನಿನಗೆ ಈಗ ಮಸೀದೆಯು ಬೇಡಹೋಗು. ಮಠವನ್ನುಕಾಣು.

ಸದಾಶಿವೇಂದ್ರ—ನೀನೂ ಬರಬೇಕು

ಚರಂತಪ್ಪ—ನಾನು ನೀನು ಬೇರೆ ಹ್ಯಾಗೆ? ನಿನ್ನಲ್ಲಿ ನಾನು ಅಲ್ಲವೆ? "ಸೋಹಂ" "ಶಿವೋಹಂ" ಎಂಬ ಮಹಾವಾಕ್ಯಗಳು ಏನು ಹೇಳುತ್ತವೆ?

ಸದಾಶಿವೇಂದ್ರ—ಒಂದೇಯಾದರೂ ಬಹಿರಾವರಣದಲ್ಲಿ ಭೇದವನ್ನು ಹೇಳುತ್ತವೆ. ಬಹಿರಾವರಣದಲ್ಲಿ ಒಂದೇಯೆಂದರೆ, ಪೂರ್ಣತ್ವವನ್ನು ಬಚ್ಚಿ ಇಡದೆ ಬಹಿರಂಗಕ್ಕೆ ಇಟ್ಟಂತಾಗಿ ಮಹಾವಾಕ್ಯದ ಉಲ್ಲಂಘನೆಯ ದೋಷವು ಪ್ರಾಪ್ತವಾಗಬಹುದು.

ಚರಂತಪ್ಪ—ಹೌದು ಹೋಗು, ಬೇಗನೆ ನಿರ್ವಾಣತ್ವವನ್ನು ಪಡೆಯುವ ಕೃಪೆಯು ನಿನಗಾಗಲಿ.

ಸದಾಶಿವೇಂದ್ರ—ಅದೆಲ್ಲ ನಿನ್ನ ಸಹವಾಸದ ಫಲವಲ್ಲವೆ?

ಈ ಮೇರೆಗೆ ನುಡಿದಬಳಿಕ ಚರಂತಪ್ಪನವರು ಮನೆಯದೆಯನ್ನು ಹೊಕ್ಕರು ಸದಾಶಿವೇಂದ್ರರು ಊರನ್ನು ಹೊಕ್ಕು, ಊರಮಧ್ಯದಲ್ಲಿರುವ ಜಿಡ್ಡಿಯಮಠಕ್ಕೆ ಹೋಗಿ, ಆ ಮಠದ ಕಟ್ಟೆಯಮೇಲೆ ತಮ್ಮ ದಂಡಕಮಂಡಲು ಮೊದಲಾದ ಸಾಮಾನುಗಳನ್ನು ಇಟ್ಟು, ಕೆರೆಗೆ ಹೋಗಿ ಸಂಧೆಯ ಕರ್ಮಗಳನ್ನು ತೀರಿಸಿಕೊಂಡು ಮಠದ ಕಟ್ಟೆಯಮೇಲೆ ಬಂದು ಕುಳಿತುಕೊಂಡರು. ಆಗ ಆ ಮಠದಲ್ಲಿದ್ದ ವೀರಮಾಂಬಾ ಎಂಬ ಸದ್ಭಕ್ತಳೊಬ್ಬಳು ಇವರನ್ನು ಕಂಡಕೂಡಲೆ ನಮಸ್ಕಾರಾದಿ ಉಪಚಾರಗಳಿಂದ ಸದಾಶಿವೇಂದ್ರರ ಸೇವೆಯನ್ನು ವಿನಯದಿಂದ ಮಾಡಿದಳು. ಆಗ ಸದಾಶಿವೇಂದ್ರರು—ಅಮ್ಮಾ. ನೀನು ಬಹು ಸುಶೀಲಳಿರುತ್ತೀ; ಇಂಥ ಸದ್ಗುಣಗಳು ನಿನ್ನನ್ನು ಆಶ್ರಯಿಸಲಿಕ್ಕೆ ನೀನು ಯಾವ ಮಹಾಮಹಿಮನ ಸೇವೆಯನ್ನು ಮಾಡಿರುವವಮ್ಮಾ, ಎಂದು ಕೇಳಲು,—ಸ್ವಾಮಿ, ಎಲ್ಲವು ನಿನ್ನ ಪಾದದ ಹಾಗು ಹೊಸಪೇಟೆಯ ಬಸವಣ್ಣೀಶನ ಅಂತಃಕರಣದ ಫಲವಲ್ಲವೆ! ಎಂದು ಹೇಳಿದಳು. ಸದಾಶಿವೇಂದ್ರರು ಆಕೆಯ ಮುಖದಿಂದ ಮಹಿಮಾಶಾಲಿಗಳಾದ ಹೊಸಪೇಟೆಯ ಶ್ರೀ ಗುರು ಬಸವಣ್ಣಸ್ವಾಮಿಗಳ ಚರಿತ್ರವನ್ನು ಕೇಳಿಕೊಂಡರು ಆಗ ಅವರು ಹೊಸಪೇಟೆಗ ಹೋಗಬಯಸಿ, ವೀರಮಾಂಬೆಗೆ ಸದ್ಬೋಧವನ್ನು ಮಾಡಿ ಹೊಸಪೇಟೆಗೆ ಹೊರಟರು ಅಲ್ಲಿ ಶ್ರೀಗುರು ಬಸವಣ್ಣಸ್ವಾಮಿಗಳ ದರ್ಶನವು ಅವರಿಗಾಯಿತು ಅವರಿಂದ ಸದಾಶಿವೇಂದ್ರರು ಸದ್ಬೋಧವನ್ನು ಪಡೆದು, ಪರಿಪೂರ್ಣ ಬ್ರಹ್ಮಾನಂದದ ಅರಿವಿಕೆಯನ್ನು ಕೇಳಿ ತಿಳಿದು, ಆ ಕೃಪಾವಂತನ ಅಪ್ಪಣೆಯನ್ನು ಪಡೆದು ಸದ್ಗುರುವಿನ ಸಾನ್ನಿಧ್ಯವನ್ನು ಪಡೆಯುವದಕ್ಕಾಗಿ ಗಂಜೀಗಟ್ಟೆಯನ್ನು ಕುರಿತು ಪ್ರಯಾಣಮಾಡಿದರು.

## ೮ನೆಯ ಪ್ರಕರಣ — ಶ್ರೀಗುರುಕೃಪೆ.

ಶಿಷ್ಯನಾದ ಸದಾಶಿವೇಂದ್ರನು ತನ್ನ ಒಳಿಗೆ ಬರುವನೆಂಬದು ಚರಂತಪ್ಪನಿಗೆ ಗೊತ್ತಿದ್ದದ್ದರಿಂದ, ಆತನು ಕಾರಡಿಗಿಯಿಂದ ಹೊರಟು ಗಂಜೀಗಟ್ಟಿಗೆಬಂದು ಕರತಲಭಿಕ್ಷೆಯನ್ನು ಬೇಡುತ್ತ ತನ್ನ ಭಕ್ತನ ಮನೆಯಲ್ಲಿರುತ್ತಿದ್ದನು. ಒಂದು ದಿವಸ ಊರೊಳಗೆ ಒಬ್ಬ ಆಚಾರಶೀಲನಾದ ಸಾಧುಪುರುಷನು ಬಂದಿದ್ದಾನೆಂಬ ಸುದ್ದಿಯು ಹಬ್ಬಿ, ಚರಂತಪ್ಪನ ಕಿವಿಗೆ ಮುಟ್ಟಿತು. ತನ್ನ ಶಿಷ್ಯನನ್ನು ಕಾಣಬೇಕೆಂಬ ಕುತೂಹಲವು ಚರಂತಪ್ಪನಿಗೆ ಇದ್ದರೂ, ತಾನಾಗಿ ಕಾಣಿಸಿಕೊಳ್ಳಬಾರದೆಂಬ ಧೂರ್ತತೆಯಿಂದ ಆತನು ಕಾಣಿಸಿಕೊಳ್ಳದೆಯಿರುತ್ತಿದ್ದನು. ಒಂದೇಊರಲ್ಲಿ ಗುರು-ಶಿಷ್ಯರು ಇಬ್ಬರೂ ಇರುತ್ತಿದ್ದರೂ ಒಬ್ಬರ ಭೆಟ್ಟಿ ಮತ್ತೊಬ್ಬರಿಗಿದ್ದಿಲ್ಲ. ಹೀಗಿರುತ್ತಿರಲು ಒಂದು ದಿನ ಸದಾಶಿವೇಂದ್ರರು ತಾವು ಇಳಿದುಕೊಂಡಿದ್ದ ಮಂತ್ರವಾಡಿ ಸಿದ್ಧರಾಮಪ್ಪನ ಮನೆಯಲ್ಲಿ ತಮ್ಮ ಪ್ರಾತಃಕಾಲದ ಶಿವಪೂಜಾದಿ ಕರ್ಮಗಳನ್ನು ತೀರಿಸಿಕೊಂಡು ನಡುಮನೆಯಲ್ಲಿ ಮಂಚದ ಮೇಲೆ ಕುಳಿತು, ತಮ್ಮ ಮಹೋನ್ನತವಾದ ಚಿಲಿಮೆಯನ್ನು ತೆಗೆದು ತಂಬಾಕವನ್ನು ಮಿದ್ದಹತ್ತಿದರು ಚಿಲಿಮೆಯು ಒಂದೆಯೊಮ್ಮೆ ಹೇಳಿದಂತೆ ಬಹು ದೊಡ್ಡದಿತ್ತು. ಅದು ಕರಿಯದೊಂದು ಜಾತಿಯ ಕಲ್ಲಿನಿಂದ ಮಾಡಲ್ಪಟ್ಟಿದ್ದು, ತುಪ್ಪದ ಕಂತಿಯನ್ನು ಮಾಡಿದ ಮೂರ್ತಿಯಂತೆ ಲಕ ಲಕ ಹೊಳೆಯುತ್ತಿತ್ತು. ಅದಕ್ಕೆ ಮೇಲೂ, ಕೆಳಗೂ ಸ್ವಚ್ಛವಾದ ಬೆಳ್ಳಿಯ ಪಟ್ಟಿಗಳನ್ನು ಕೂಡ್ರಿಸಿ, ನಡು ನಡುವೆ ಬಂಗಾರದ ಹೂಗಳನ್ನು ಕೂಡ್ರಿಸಿದ್ದರು ಈ ಚಿಲಿಮೆಯು ಪೂರ್ಣವಾಗಿ ತುಂಬಲಿಕ್ಕೆ ಏನಿಲ್ಲೆಂದರೂ ಮೂರು ನಾಲ್ಕು ತೊಲೆ ಗಾಂಜೆಯು ಬೇಕಾಗುತ್ತಿತ್ತು. ಸದಾಶಿವೇಂದ್ರರು ಈ ಚಿಲಿಮೆಯನ್ನು ಒಮ್ಮೆ ತುಂಬಿಯಿಟ್ಟುಕೊಂಡರೆ, ಆವೊತ್ತಿನ ಹಗಲು ರಾತ್ರಿಯೆಲ್ಲ ಅವರಿಗೆ ಸೇದಲಿಕ್ಕೆ ಸಾಲುತ್ತಿತ್ತು. ನಿತ್ಯದಂತೆ ಅವರು ತಂಬಾಕವನ್ನು ಮಿದ್ದುತ್ತ ಕುಳಿತಿರಲು, ಹೊರಗೆ ಬಾಗಿಲಲ್ಲಿ ಯಾರೋ— "ಅಮ್ಮಾ, ರೊಟ್ಟೀ ಕೊಡು, ರೊಟ್ಟೀ" ಎಂದು ಒದರಿದ ಶಬ್ದವು ಕೇಳಬಂತು. ಯಾವಾದರೂ ಹುಡುಗರು ಒದರುತ್ತಿರಬಹುದೆಂದು ಸದಾಶಿವೇಂದ್ರರು ಅತ್ತ

ದುರ್ಲಕ್ಷಿಸಿದರು. ಮತ್ತೆ ಒಂದೆರಡು ಸಾರೆ ಅದೇ ಶಬ್ದವು ಗೊಗ್ಗರದನಿಯಿಂದ ಅಂದದ್ದು ಸದಾಶಿವೇಂದ್ರರಿಗೆ ಕೇಳಿಸಿತು ಆಗ ಅವರು ಬಾಗಿಲಕಡೆಗೆ ನೋಡ ಲಾಗಿ ಒಬ್ಬ ಸಾಧಾರಣ ಎತ್ತರದ ಮನುಷ್ಯನು ಒಂದು ಮಾಸಿದ ಬಿಳಿಯ ಗೊಂಗಡಿಯ ಹರಕ ತುಂಡನ್ನು ಮೈಮೇಲೆ ಹಾಕಿಕೊಂಡು, ಒಂದು ಮಾಸಿದ ಕ್ಯಾವಿಯ ಪಂಜಿಯನ್ನು ತಲೆಗೆ ಸುತ್ತಿಕೊಂಡು, ಕೌಪೀನವನ್ನು ಧರಿಸಿ, ಕೈಯಲ್ಲಿ ಒಂದು ರೊಟ್ಟಿಯ ತುಣುಕನ್ನು ಹಿಡಿದು, ಆಗಾಗ್ಗೆ ಅದನ್ನು ಹಲ್ಲಿನಿಂದ ಹರಿದು ಜಗಿದು ತಿನ್ನುತ್ತ ನಿಂತಿದ್ದನು. ಆಗ ಅವನನ್ನು ನೋಡನೋಡುತ್ತಿರುವಷ್ಟ ರಲ್ಲಿ ಆ ಹುಚ್ಚನು ಅಲ್ಲಿಯೇ ಬಾಗಿಲಲ್ಲಿ ಇದ್ದ ಕಲ್ಲ ದೋಣಿಯೊಳಗಿನ ನೀರನ್ನು ಅಂಬೇಗಾಲು ಹಚ್ಚಿ ಬಗ್ಗಿ ಲೊಚ ಲೊಚ ಕುಡಿಯಹತ್ತಿದನು

ಸದಾಶಿವೇಂದ್ರರು ಸುಮ್ಮನೆ ಆತನನ್ನು ನೋಡುತ್ತ ಕುಳಿತುಕೊಂಡರು. ಆಗ ಆ ಹುಚ್ಚನಂಥವನು ನೀರು ಕುಡಿಯುವದು ಸಾಕಾಯಿತೆಂಬ ಭಾವವನ್ನು ತೋರಿಸುತ್ತ ಮೇಲಕ್ಕೆದ್ದನು. ಆಗ ಸದಾಶಿವೇಂದ್ರರು ಒಂದು ಆಶ್ಚರ್ಯದ ಸಂಗತಿಯನ್ನು ನೋಡಿದರು. ಹುಚ್ಚನು ಕಲ್ಲ ದೋಣಿಯೊಳಗಿನ ನೀರು ಕುಡಿ ಯುತ್ತಿದ್ದರೂ, ಆತನ ನಾಲಿಗೆಯು ನೀರಿಗೆ ಹತ್ತುತ್ತಿದ್ದಿಲ್ಲ ನೀರು ಮಾತ್ರ ಅಲ್ಲಾಡಿದಂತೆ ಆಗುತ್ತಿತ್ತು. ಇದನ್ನು ನೋಡಿ ಗುರ್ವನುಗ್ರಹವನ್ನು ಆಶಿಸುತ್ತ ಕುಳಿತಿದ್ದ ಸದಾಶಿವೇಂದ್ರರ ಮನಸ್ಸಿನಲ್ಲಿ ಏನೋ ಒಂದು ಕಲ್ಪನೆಯುಂಟಾಯಿತು. ಅವರ ಬಲಗಣ್ಣೂ, ಬಲಭುಜವೂ ಹಾರಹತ್ತಿದವು ಮನಸ್ಸಿಗೆ ಏನೋ ಒಂದು ತರದ ಸಂತೋಷವಾದಂತಾಗಿ, ನೋಡಿದತ್ತೆಲ್ಲ ಆನಂದವೇ ಅನುಭವಕ್ಕೆ ಬರ ತೊಡಗಿತು. ಪ್ರತಿದಿನ ಹೃದಯದಲ್ಲಿ ಸ್ಥಾಪಿಸಲ್ಪಡತಕ್ಕ ಗುರುಮೂರ್ತಿಯು ಅಂದು ಚಲನೆಯಿಲ್ಲದೆ ಸ್ಥಿರವಾಗಿ ನಿಂತುಕೊಂಡಿತು. ಈಮೇರೆಗೆ ಶುಭಶಕುನ ಗಳು ತೋರುತ್ತಿರಲು, ಹೊರಗೆ ಬಾಗಿಲಲ್ಲಿ ನಿಂತುಕೊಂಡಿದ್ದ ಆ ಹುಚ್ಚನು— ನನ್ನ ಮೈಸೂರ, ಈಮೊತ್ತು ಶ್ರಾವಣ ಸೋಮವಾರ ನೋಡು, ನಿಮ್ಮಪ್ಪನನ್ನು- ಆ ಚಿಲಿಮೆಯನ್ನು ಕೊಡುತ್ತೀಯೋನು? ತಂಬಾಕ ಸೇದುತ್ತೇನ, ಎಂದು ಸದಾ ಶಿವೇಂದ್ರರಚಿಲಿಮೆಯನ್ನು ಕೈಮಾಡಿ ತೋರಿಸಲು, ಅದಕ್ಕೆ ಸದಾಶಿವೇಂದ್ರರು— ಹಾಗಾದರೆ ಇಲ್ಲಿಗೆ ಬಾ, ಎಂದು ಆ ಹುಚ್ಚನನ್ನು ಕರೆದರು. ಕೂಡಲೆ ಚರಂ ತಪ್ಪನು ಒಳಗೆ ಬಂದೇ ಬಿಟ್ಟನು. ಬಂದಕೂಡಲೆ ಆತನು "ಚಿಲಿಮೆಯನ್ನು ಕೊಡು ಸೇದುತ್ತೇನೆ" ಎಂದು ಸದಾಶಿವೇಂದ್ರರನ್ನು ಮತ್ತೆ ಕೇಳಲಾಗಿ

ಅವರು—ನೇದುವ ಸತ್ವವು ನಿನ್ನಲ್ಲಿ ಉಂಟೋ? ಎಂದು ಕೇಳಿದರು. ಅದಕ್ಕೆ ಚರಂತಪ್ಪನು—ಉರ್ವಕೊಂಡಿಯ ಶಿವಯೋಗೀಶ್ವರನ ಕೃಪಾಫಲವಲ್ಲವೇ ನೇದುವದು, ಎಂದ ಕೂಡಲೆ ಈತನೇ ಚರಂತಪ್ಪನೆಂದು ನಿಶ್ಚಯಿಸಿ, ಹಾಗಾದರೆ ನೇದು ಹಿಡಿ, ಎಂದು ಕೈಯೊಳಗಿನ ಶಿರೋಯ್ದು ಶಂಬಾಕವನ್ನು ಕೊಡಹೋಗಲು,

ಚರಂತಪ್ಪ—ಅಲ್ಲಲೇ, ಹಾಗಲ್ಲ ನೇದುವದನ್ನು ಶೋಧಿಸಿ ನೇದಿದರೆ ಸುಖವಾದೀತು.

ಸದಾಶಿವೇಂದ್ರ—ಶೋಧಿಸಿರುತ್ತದೆ, ಹಿಡಿ

ಚರಂತಪ್ಪ—ಹೌದು, ಶೋಧಿಸಿದ್ದನ್ನು ನಾನು ಬಲ್ಲೆನು, ಆದರೆ ಅದು ಪಕ್ವವಾಗಿದ್ದಿಲ್ಲವಾದ್ದರಿಂದ ಅದನ್ನು ಸ್ವಲ್ಪ ಹೊತ್ತು ಇಡಬೇಕಾಯಿತು.

ಈಮೇರೆಗೆ ಚರಂತಪ್ಪನು ಭಾವಗರ್ಭಿತವಾದ ವೇದಾಂತದ ವಾಕ್ಯಗಳನ್ನು ನುಡಿಯುತ್ತ ಮಂಚದ ಒಳಿಯಲ್ಲಿ ನಿಂತಿರಲು, ಮಂಚದ ಮೇಲೆ ಕುಳಿತಿದ್ದ ಸದಾಶಿವೇಂದ್ರರು ಈತನನ್ನು ಪೂರ್ಣ ಒರೆಗೆ ಹಚ್ಚಿ ನೋಡಬೇಕೆಂದು ಹಸಿ ಗಾಂಜಿಯಿಂದ ತುಂಬಿದ ಚಿಲಿಮೆಯನ್ನು ಚರಂತಪ್ಪನ ಕೈಯೊಳಗೆ ಕೊಟ್ಟರು. ಆಗ ಚರಂತಪ್ಪನು ಚಿಲಿಮೆಯನ್ನು ತೆಗೆದುಕೊಂಡು ಬೆಂಕಿಯಿಲ್ಲದೆ ನೊರ್ರನೆ ನೇದಲು ಆ ಚಿಲಿಮೆಯ ಮೇಲೆ ಒಂದು ಗೇಣು ಎತ್ತರವಾದ ಉರಿಯು ಎದ್ದಿತು. ಚಿಲಿಮೆಯೊಳಗೆ ಹಾಕಿದ್ದ ಹಸಿಯ ಗಾಂಜೆಯು ಸುಟ್ಟು ಓದೆಯಾಗಲು, ಚರಂತಪ್ಪನು ಚಿಲಮೆಯನ್ನು ಊದಿದ್ದರಿಂದ ಓದಿಯು ಹಾರಿ ಒರಿಯ ಚಿಲಿಮೆಯು ಆತನ ಕೈಯಲ್ಲಿ ಉಳಿಯಿತು ಬಳಿಕ ಚರಂತಪ್ಪನು ಚಿಲಿಮೆಯನ್ನು ಕೆಳಗಿಟ್ಟು ನಿಂತುಕೊಂಡನು ಆಗ ಪರಮಾಶ್ಚರ್ಯಪಟ್ಟು ಸದಾಶಿವೇಂದ್ರರು ಚಟ್ಟನೆ ಎದ್ದು ಮಂಚವನ್ನು ಬಿಟ್ಟು ಕೆಳಗಿಳಿದು ತಮ್ಮ ಧರ್ಮಾಚಾರದ ಗೌರವದ ಅಭಿಮಾನವನ್ನು ತ್ಯಜಿಸಿ ಚರಂತಪ್ಪನಿಗೆ ದೀರ್ಘದಂಡವತ ನಮಸ್ಕಾರವನ್ನು ಮಾಡಿ, ಕೂಡಲೆ ಆ ಮೂರ್ತಿಯನ್ನು ಜುಲುಮೆಯಿಂದ ಕೈಹಿಡಿದು ಮಂಚದ ಮೇಲೆ ಕೂಡ್ರಿಸಿ ತಾವು ಕೆಳಗೆ ಕುಳಿತುಕೊಂಡು ಪುನಃ ನಮಸ್ಕರಿಸಿ—ಗುರುವರ್ಯಾ, ಇಂದಿಗೆ ನೀನು ನನಗೆ ಗುರುವರನಾದೆ ನಿನ್ನ ಚರಣ ಸಂದರ್ಶನದಿಂದ ನಾನು ಧನ್ಯನಾದೆನು. ನಿನ್ನ ವಿಷಯವಾಗಿ ನನ್ನ ಮನಸ್ಸಿನಲ್ಲಿದ್ದ ಸಂಶಯವು ದೂರವಾಯಿತು. ಇನ್ನು ನಿನ್ನ ಪಾದವನ್ನು ನಂಬಿದೆನು. ಮುಂದೆ ಈ ಸೇವಕನನ್ನು ಯಾವ ಗತಿಗೆ ಮುಟ್ಟಿಸುವಿಯೋ ಮುಟ್ಟಿಸು.

ನಾನು ಚಿಕ್ಕಂದಿನಿಂದ ಬಹು ಕಷ್ಟಪಟ್ಟು ಉರ್ವಕೊಂಡೀಶನ ಸೇವೆಮಾಡಿದರೂ ನನಗೆ ಆತನ ಕೃಪೆಯಾಗಲಿಲ್ಲ ಅದೇ ಮಹಾತ್ಮನ ಕೃಪೆಯನ್ನು ನೀನು ನಿರಾಯಾಸವಾಗಿ ಸಂಪಾದಿಸಿದೆ. ನಾನು ಉರ್ವಕೊಂಡೀಶನ ಅಪ್ಪಣೆಯಂತೆ ಈಗ ನಿನಗೆ ಶರಣು ಒಂದಿದ್ದೇನೆ, ಉದ್ಧರಿಸು ಗುರ್ವಾಜ್ಞೆಯಂತೆ ಈಗ ೩೦-೩೫ ವರ್ಷಗಳಿಂದ ಅನೇಕ ದೇಶಗಳನ್ನು ಸಂಚರಿಸಿದರೂ ನಿನ್ನ ಗೊತ್ತು ಹತ್ತಲಿಲ್ಲ. ಕರ್ಮಬಲದಿಂದ ಧರ್ಮಾಭಿಮಾನಕ್ಕೆ ಬಿದ್ದ ನನಗೆ, ನಿನ್ನ ಗುರುತಾದರೂ ಹ್ಯಾಗೆ ಹತ್ತಬೇಕು? ಹೀಗೆ ಲೌಕಿಕಾಭಿಮಾನದಿಂದ ಕೊಳೆಯುತ್ತಿದ್ದ ನಾನು ಇಂದಿಗೆ ನಿನ್ನನ್ನು ಕಂಡು, ಅಂತರ್ಯದಿಂದ ಹಿಡಿದು ಧನ್ಯನಾದೆನು ಧನ್ಯನಾದೆನು!! ನಾನೋರ್ವನು ನಿನ್ನ ಪುತ್ರನೇ. ನಿನ್ನಿಂದಲೇ ನನಗೆ ಸದ್ಗತಿಯು ದೊರೆಯಬೇಕಲ್ಲದೆ ಸದ್ಗತಿ ಕೊಡುವವರು ಬೇರೆ ಯಾರಿರುವರು? ಹೇ ದೇವಾ, ನನ್ನನ್ನು ರಕ್ಷಿಸು-ರಕ್ಷಿಸು, ಎಂದು ದೀರ್ಘದಂಡ ಪ್ರಣಾಮದೊಡನೆ ಬಿದ್ದುಕೊಂಡಿರಲಾಗಿ ಚರಮೂರ್ತಿಗೆ ಕರುಣ ಹುಟ್ಟಿ ಆತನು—ಎಲೈ ಶಿಷ್ಯೋತ್ತಮನಾದ ಸದಾಶಿವನೇ, ಏಳು ಏಳು ನಿನ್ನ ಹತ್ತರವೇ ಇರುತ್ತಿದ್ದ ವಸ್ತುವನ್ನು ಪೂರ್ವಾರ್ಜಿತ ಕರ್ಮಫಲದಿಂದ ಗುರ್ತಿಸದ ನೀನು, ಕರ್ಮಪರಿಪಾಕದಿಂದ ಇಂದಿಗೆ ನಿಶ್ಚಯವಾಗಿ ಗುರ್ತಿಸಿ ಧನ್ಯನಾದೆ ಏಳು ಇನ್ನು ನಿನ್ನ ಜನ್ಮವು ಪಾವನವಾಗುವದು. ಏಳು ಏಳೆಂದು ಮಸ್ತಕದ ಮೇಲೆ ಹಸ್ತವನ್ನಿಟ್ಟು, ಆನಂದಬಾಷ್ಪಪೂರಿತ ಲೋಚನನಾಗಿ ಎರಡೂ ಕೈಗಳಿಂದ ತಲೆಯನ್ನು ಹಿಡಿದು ಎಬ್ಬಿಸಿದನು. ಕೂಡಲೆ ಸದಾಶಿವಸಾಧುವಿಗಾದ ಆನಂದವನ್ನು ವರ್ಣಿಸಲಸಾಧ್ಯವು. ನಾನು ಯಾರು, ಎಲ್ಲಿ, ಇದ್ದೇನೆ, ಎಂಬದರ ಎಚ್ಚರವು ಅಂಥ ಮನೋನಿಗ್ರಹಮೂರ್ತಿಗೂ ಉಳಿಯಲಿಲ್ಲ ಹೀಗೆ ಉಭಯರೂ ಆನಂದಪಡುತ್ತಿರಲು, ಚರಂತಪ್ಪನು ಶಿಷ್ಯನೊಡನೆ ಹೊರಟು ತಾನು ದಿನಾಲು ಕೂಡ್ರುತ್ತಿದ್ದ ಬನ್ನಿಯ ಮರದ ಬುಡಕ್ಕೆ ಹೋಗನು ಚರಮೂರ್ತಿವರನು ಸದಾಶಿವನನ್ನು ಎದುರಿಗೆ ಕುಳ್ಳಿರಿಸಿಕೊಂಡು ಆತ್ಮಾನುಭವದ ರಹಸ್ಯವನ್ನು ತಿಳಿಸಿಕೊಡಹತ್ತಿದನು. ಈ ಬೋಧವೂ, ಯೋಗಾಭ್ಯಾಸವೂ ಎರಡು ವರ್ಷಗಳ ವರೆಗೆ ಸಾಗಿದ ಬಳಿಕ, ಅವನ್ನು ತುಚ್ಛೀಕರಿಸಿ, ಕಡೆಗೆ ಚರಂತಪ್ಪನು ಪರಮಾನುಗ್ರಹದಿಂದ ಆತ್ಮಾನುಭವದ ಸುಖವನ್ನು ಶಿಷ್ಯನಿಗೆ ಒದಗಿಸಿ ಕೊಟ್ಟನು!!

---

## ೯ನೆಯ ಪ್ರಕರಣ—ದಿನಚರ್ಯೆ.



ಈ ಮೇರೆಗೆ ಸದಾಶಿವೇಂದ್ರರು ತಪಸ್ಸಿನಿಂದ ಕ್ಷೀಣವಾದ ಪಾಪವುಳ್ಳವರೂ, ಶಾಂತರೂ, ವಿರಕ್ತರೂ, ಮುಮುಕ್ಷುಗಳೂ ಆದದ್ದರಿಂದ, ಶ್ರೀಶಂಭುಲಿಂಗ ಚರಮೂರ್ತಿಗಳವರ ಅನುಗ್ರಹವನ್ನು ಪಡೆದು ಕೃತಕೃತ್ಯರಾಗಿ ಗುರುಸೇವೆಗೆಯ್ಯುತ್ತ ಕಾಲಹರಣ ಮಾಡುತ್ತಿದ್ದರು. ಚರಮೂರ್ತಿಗಳು ಶಿಷ್ಯರೊಡನೆ ಬ್ರಹ್ಮೋಪಾಸನೆಯನ್ನು ಮಾಡುತ್ತ, ಪೂರ್ವದಲ್ಲಿ ತಾವು ಸಂಚರಿಸಿದ್ದ ದೇವಗಿರಿ, ಛಬ್ಬಿ, ಇಂಗಳಗಿ, ಕುರ್ತಕೋಟಿ, ರಾಮಗಿರಿ, ಕೆಂಗಾಪುರ, ಕಾರಡಿಗಿ ಮೊದಲಾದ ಗ್ರಾಮಗಳಲ್ಲಿ ಕೆಲಕೆಲವು ದಿವಸ ವಾಸಿಸುತ್ತ ಶಿಷ್ಯರನ್ನು ಬೋಧಿಸುತ್ತ, ಸದ್ಬೋಧಚಂದ್ರಿಕೆಯು ತನ್ನ ಆಶ್ರಯಪಾತ್ರಗಳ ಪುಣ್ಯದಿಂದ ದಿನದಿನಕ್ಕೆ ಅಭಿವೃದ್ಧಿಹೊಂದುವಂತೆ, ಮಹಾತ್ಮರಾದ ಆ ಗುರುಶಿಷ್ಯರೀರ್ವರು ತಮ್ಮ ತಮ್ಮ ಶಿಷ್ಯರ ಪುಣ್ಯಪ್ರತಾಪದಿಂದ ದಿನದಿನಕ್ಕೆ ಪ್ರಕಾಶಿತರಾಗುತ್ತಲಿದ್ದರು ಅವರಿಬ್ಬರ ಶಿಷ್ಯಸಂಪತ್ತು ಹೆಚ್ಚುತ್ತ ಹೋಯಿತು ಧರ್ಮದ ಅಭಿಮಾನವು ಅವರಲ್ಲಿದ್ದಿಲ್ಲ. ಅವರು ಸರ್ವತ್ರ ಸಮಭಾವವುಳ್ಳವರಾಗಿದ್ದರು ತಮ್ಮ ನಿಯಮಗಳನ್ನು ಉಲ್ಲಂಘಿಸದ ಆ ಮಹಾತ್ಮರು ಸರ್ವರ ಪ್ರೀತಿಗೂ ಪಾತ್ರರಾಗಿದ್ದರು. ಗುರುಶಿಷ್ಯಭಾವವು ಇಂಥಾದ್ದೇ ಎಂದು ಅವರನ್ನು ನೋಡಿ ಕಲಿತುಕೊಳ್ಳಬಹುದಾಗಿತ್ತು. ವರ್ಷದಲ್ಲಿ ಒಂದಾವರ್ತಿ ಅವರು ಗಂಜೀಗಟ್ಟಿಗೆ ಬಂದು ಕೆಲವು ದಿನಗಳವರೆಗೆ ಅಲ್ಲಿ ಇದ್ದು, ಪುನಃ ತಮ್ಮ ಮನಸ್ಸು ಬಂದ ಕಡೆಗೆ ಹೋಗುತ್ತಿದ್ದರು. ಅವರು ಇದ್ದ ಸ್ಥಳದಲ್ಲಿ ಅನ್ನದಾನವೂ, ಜಂಗಮದಾಸೋಗಾದಿಗಳೂ ನಡೆಯುತ್ತಿದ್ದವು.

ಹೀಗಿರುವಾಗ ಚರಮೂರ್ತಿಗಳಿಗೆ ಅಶಕ್ತಿಯುಂಟಾಯಿತು ಅವರಿಗೆ ಎಳ್ಳು ಇಟ್ಟರೆ ಸಿಡಿಯುವಂಥ ಜ್ವರ ಬಂದವು. ಅವರು ಎಲ್ಲ ವ್ಯಾಪಾರಗಳನ್ನು ಮರೆತು ಶಿವಧ್ಯಾನತತ್ಪರರಾದರು ಇದನ್ನು ನೋಡಿ ಸದಾಶಿವೇಂದ್ರರು—ದೇವಾ ಗುರುವರ್ಯನೇ, ಇದೇನು ವಿಪರೀತ ಕಾಲವು? ಎಂದು ಕೇಳಲು, ಚರಮೂರ್ತಿಗಳು—ಮಗನೇ ಸ್ಥೂಲಘಟವು ಸೂಕ್ಷ್ಮತ್ವವನ್ನು ಹೊಂದುವಾಗ ಸ್ವಾಭಾವಿಕ ಸ್ಥಿತಿಗನುಸರಿಸಿ ಕಾರ್ಯನಡೆದಿರುವದು. ಅದಕ್ಕೆ ಬೇರೆ ಕಾರಣವನ್ನೇನು ಹೇಳಬೇಕು? ಈ ಪ್ರಸಂಗದಲ್ಲಿ ನಾನು ಮಾಡುವದೇನು-ನೀನು ಮಾಡುವದೇನು?

ಯಾರು ಮಾಡುವದೇನು? ನೀನು ಬ್ರಹ್ಮಧ್ಯಾನಪರಾಯಣನಾಗಿ ನನ್ನಂತೆ ಕಂಡ ಸದ್ಗತಿಯನ್ನು ಕೂಡಿಕೊಳ್ಳುವವನಾಗು, ಎಂದು ಹೇಳಿ ಅಲ್ಲಿ ನೆರೆದ ಭಕ್ತರನ್ನು ನೋಡಿ—ನೀವು ಸದಾಚಾರಿಗಳಾಗಿರಿ. ಜಗತ್ತಿನಮಾಯೆಯ ತೋರಿಕೆಗೆ ಮರುಳಾಗಿ ತೀರ ವಿಷಯಲಂಪಟರಾಗಬೇಡಿರಿ. ನಾನು ಇನ್ನುಮೇಲೆ ಈ ಮಲಿನಶರೀರವನ್ನು ಬಿಡುತ್ತೇನೆ ಎಂದು ಹೇಳಿ ಶಾಲಿವಾಹನಶಕದ ೧೭೮೧ನೇ ಶ್ರಾವಣಶುದ್ಧ ದಶಮಿಯ ದಿವಸ ಗಂಜೀಗಟ್ಟಿಯಲ್ಲಿ ದೇಹವನ್ನಿಟ್ಟರು. ಆಗ ಸದಾಶಿವೇಂದ್ರ ಸಾಧುಗಳು ಭಕ್ತರ ಸಹಾಯದಿಂದ ಮಂತ್ರವಾದಿ ಸಿದ್ಧರಾಮಪ್ಪನ ಸ್ವಾಮಿತ್ವಕ್ಕೆ ಒಳಪಟ್ಟಿದ್ದ ಸ್ಥಳದಲ್ಲಿ ಲಿಂಗಮುದ್ರಾ ಸ್ಥಾಪನೆಯನ್ನು ಮಾಡಿ, ಅಲ್ಲಿ ಸಿದ್ಧಗೊಳಿಸಿದ್ದ ಕ್ರಿಯಾಸಮಾಧಿಯಲ್ಲಿ ಗುರುವರನ ಸಮಾಧಿಶೀಲವಾಗಿದ್ದ ಶರೀರವನ್ನು ಸಮಾಧಿಗೊಳಿಸಿ, ದಾನಧರ್ಮಗಳನ್ನು ಮಾಡಿದರು. ಮುಂದೆ ಸಮಾಧಿಯ ಮೇಲೆ ಗದ್ದಿಗೆಯನ್ನು ಸ್ಥಾಪಿಸಿ ಅದರಮೇಲೆ ಮಠವನ್ನುಕಟ್ಟಿಸಿ, ಆರಾಧನೆಗಳೂ, ಪೂಜಾಪುನಸ್ಕಾರಗಳೂ ನಡೆಯುವಂತೆ ವ್ಯವಸ್ಥೆಯನ್ನು ಮಾಡಿದರು. ವರ್ಷಕ್ಕೊಂದಾವರ್ತಿ ಕಾರ್ತಿಕ ಅಮಾವಾಸ್ಯೆಗೆ ರಥೋತ್ಸವವನ್ನು ಮಾಡತೊಡಗಿದರು ಆ ಉತ್ಸವವು ಈಗಲಾದರೂ ಒಳ್ಳೆಯ ಸ್ಥಿತಿಯಿಂದ ನಡೆಯುತ್ತಲಿದೆ.

ಈ ಮೇರೆಗೆ ಗುರುಗಳು ಸಮಾಧಿಸ್ಥರಾದ ಬಳಿಕ ಸದಾಶಿವಸಾಧುಗಳ ಕೀರ್ತಿಯು ಗುರುಕೃಪೆಯಿಂದ ದಿನದಿನಕ್ಕೆ ಹೆಚ್ಚಹತ್ತಿತು. ಅವರು ಮತ್ತೊಮ್ಮೆ ತೀರ್ಥಯಾತ್ರೆಗೆ ಹೊರಟು, ಭಾವಿಕರಿಗೆ ಧರ್ಮದ ನಿಜವಾದ ರಹಸ್ಯವನ್ನು ತಿಳಿಸುತ್ತ, ಅಧಿಕಾರಿಗಳಿಗೆ ಜೀವನ್ಮುಕ್ತಿಯನ್ನು ಬೋಧಿಸುತ್ತ, ಜಗತ್ತಿಗೆ ಅನೇಕ ಮಹಿಮೆಗಳನ್ನು ತೋರಿಸುತ್ತ ಕ್ಷೇತ್ರಗಳನ್ನು ಸಂಚರಿಸಿದರು ಸದಾಶಿವಸಾಧುಗಳು ಸುಜನರನ್ನು ಸದ್ಬೋಧದಿಂದ ಸಂತೋಷಪಡಿಸುತ್ತಿದ್ದದ್ದು ಆಶ್ಚರ್ಯವಲ್ಲ. ಒರಟತನದವರನ್ನು ಕೂಡ ಅವರು ಹಣ್ಣುಮಾಡಿ ಹಾದಿಗೆ ತರುತ್ತಿದ್ದರು. ಒಮ್ಮೆ ಸಾಧುಗಳು ಬೋಧವನ್ನು ನಡಿಸಿರುವಾಗ ಇತ್ತಂಡವಾದಿಯಾದ ಒಬ್ಬ ಮಡ್ಡನು ಅವರನ್ನು ಕುರಿತು—ಸ್ವಾಮಿ, "ಅಲಲ-ಅಬ್ಬಬ್ಬ ಅಂದರೇನು? ಎಂದು ಕೇಳಿದನು. ಆಗ ಸಾಧುಗಳು ಅವನ ಸ್ವರೂಪಮಾತ್ರದಿಂದ ಮನೋಭಾವವನ್ನರಿತು ಹೀಗೆ ಪ್ರಶ್ನೆ ಮಾಡಲಾಗದೆಂದು ಆತನಿಗೆ ತಿಳಿಸಿ ಹೇಳಿದರು. ಆದರೆ ಆ ಮಡ್ಡನು ಕೇಳಲಿಲ್ಲ ಅಷ್ಟರಲ್ಲಿ ಸಾಧುಗಳು ಕುಳಿತುಕೊಂಡಿದ್ದ ಮಂಗಳಗ ಬುಡಗೊಳಗಿಂದ ಒಂದು ಭಯಂಕರವಾದ ಚೇಳು ಕೊಂಡಿಯನ್ನು

ಎತ್ತಿಕೊಂಡು ಆ ಮೂರ್ಖನು ಕುಳಿತುಕೊಂಡಿರುವ ಕಡೆಗೆ ವೇಗದಿಂದ ಬರ ತೊಡಗಿತು. ಆಗ ಸಾಧುಗಳು—ಎಲೈ ಮಗನೇ ಈ ವೃಶ್ಚಿಕರಾಜನು ನಿನ್ನ ಕಡೆಗೆ ಬರುತ್ತಾನೆ ನೋಡು, ಆತನನ್ನು ಮುಟ್ಟಿ ಕೇಳಿದರ ನಿನ್ನ ಪ್ರಶ್ನದ ಉತ್ತ ರವು ದೊರೆಯುವದು, ಎಂದು ಹೇಳಿದರು ಆಗ ಆ ಮೂರ್ಖನು ಬೆದರಿ ಸಾಧು ಗಳ ಕ್ಷಮೆಬೇಡಿ ಅಂದಿನ ದಾಸೋಗದ ವಚ್ಚವನ್ನು ಕೊಟ್ಟನು ಇಂಥ ಹಲವು ಲೀಲೆಗಳನ್ನು ಸಾಧುಗಳು ಮಾಡಿದರು ಅವನ್ನೆಲ್ಲ ವರ್ಣಿಸಲಕ್ಕೆ ಸ್ಥಳಸಾಲದು ಸಾಧುಗಳು ತೀರ್ಥಯಾತ್ರೆಗಳನ್ನು ತೀರಿಸಿಕೊಂಡು ಗಂಜೀಗಟ್ಟಿಗೆ ಬಂದು ವಾಸಿಸಿದರು. ಸದಾಶಿವ ಸಾಧುಗಳ ಮುಖ್ಯಗುಣವೇನಂದರೆ, ಸಮದೃಷ್ಟಿಯು. ಅದರಿಂದ ಅವರು ಸರ್ವರ ಆದರಕ್ಕೂ ಪಾತ್ರರಾಗಿದ್ದರು ಅವರಿಗೆ ಎಂಬತ್ತು ವರ್ಷಗಳಾದವು. ಅಷ್ಟು ಮುಪ್ಪಿನವರಾದರೂ ಅವರ ಮುಖಕಾಂತಿಯು ಲೇಶವಾದರೂ ಕಂದಿದ್ದಿಲ್ಲ ಅವರ ಉದ್ದವಾದ ದೇಹವು ಸ್ವಲ್ಪಾದರೂ ಬಾಗಿ ದ್ದಿಲ್ಲ. ಅವರ ಮೈಬಣ್ಣವು ಲಿಂಬಿಹಣ್ಣಿನ ಬಣ್ಣವನ್ನು ಹೋಲುತ್ತಿತ್ತು ಬಾಯಲ್ಲಿ ಹಲ್ಲುಗಳು ಇದ್ದಿಲ್ಲ. ಒಂದೇ ಹಲ್ಲು ಇದ್ದು ಅದು ಗಡ್ಡಗಟ್ಟಿದಹಾಗೆ ಆಗಿತ್ತು. ಹೀಗಿದ್ದರೂ ಸಾಧುಗಳ ವರ್ಣೋಚ್ಚಾರದ ಸ್ಪಷ್ಟತೆಗೆ ಬಾಧಬಂದಿ ದ್ದಿಲ್ಲ. ಸಂಶಯನಿವಾರಣ ಮಾಡುವ ಚಾತುರ್ಯವು ಇವರಲ್ಲಿ ವಿಚಿತ್ರವಾಗಿ ಇತ್ತು. ಇವರು ಮೈಮೇಲೆ ಇಂಥ ವಸ್ತ್ರಗಳನ್ನೇ ಧರಿಸುತ್ತಿದ್ದರೆಂಬ ನಿಯಮ ವಿದ್ದಿಲ್ಲ. ಇದ್ದವುಗಳಲ್ಲಿಯಾದರೂ ಆಸಕ್ತಿಯು ಇರುತ್ತಿದ್ದಿ ಅವುಗಳನ್ನು ಮಂದಿಗೆ ಕೊಟ್ಟುಬಿಡುವದೇ ಅವರ ಪದ್ಧತಿಯಾಗಿತ್ತು ಒರಬರುತ್ತ ಅವರು ಗಾಂಜೇಸೇದುವದನ್ನು ಕಡಿಮೆ ಮಾಡಿದರು ಗಾಂಜೇಸೇದಲು ಶಕ್ಯವರಾ ರೆಂದು ಹೇಳಿ, ಸಂಸಾರಿಕರಂತು ಅದನ್ನು ಮುಟ್ಟಲಾಗದೆಂದು ಬೋಧಿಸುತ್ತಿ ದ್ದರು. ಈ ಮೇರೆಗೆ ಸದಾಶಿವಸಾಧುಗಳು ಲೋಕಾನುಗ್ರಹಕಾರಿಗಳಾಗಿ ೮೦ ವರ್ಷ ಜೀವಿಸಿ ಮುಪ್ಪಿನವರಾಗಿ ತಮ್ಮ ಜಡದೇಹವನ್ನು ತ್ಯಜಿಸಿ ಕೀರ್ತಿಶೇಷ ರಾದರು.



ಸಂಪೂರ್ಣ.